ಪ್ರಚಾರ ಪುಸ್ತಕ ಮಾಲೆ

149

# ನಿಜಗುಣ ಶಿವಯೋಗಿ

ಎಚ್. ಗಂಗಾಧರನ್



ಪ್ರಚಾರ ಪುಸ್ತಕಮಾಲೆ–೧೪೯

# ನಿಜಗುಣ ಶಿವಯೋಗಿ

ಎಚ್. ಗಂಗಾಧರನ್, ಎಂ.ಎ., ಬಿ.ಎಲ್.




1984

ಮೊದಲನೆಯ ಮುದ್ರಣ : ೧೯೬೭
ಎರಡನೆಯ ಮುದ್ರಣ : ೧೯೭೩
೫,೦೦೦ ಪ್ರತಿಗಳು
ಮೂರನೆಯ ಮುದ್ರಣ : ೧೯೮೪
೧೦,೦೦೦ ಪ್ರತಿಗಳು



ಬೆಲೆ : ೨೫ ಪೈಸೆ

ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೬

ಮುದ್ರಕರು
ನಿರ್ದೇಶಕರು, ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು-೬

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೋ ಒಂದೆರಡು ದಿನ ನೆಲಸಿ, ಸಾಮಾನ್ಯಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ; ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ನೂರ ನಲವತ್ತೆಂಟು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಎಚ್. ಗಂಗಾಧರನ್ ಅವರ 'ನಿಜಗುಣ ಶಿವಯೋಗಿ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು
೧೫–೫–೧೯೬೭

**ಕೆ. ಎಲ್. ಶ್ರೀಮಾಲಿ**
ವೈಸ್-ಛಾನ್ಸಲರ್

# ನಿವೇದನೆ

ಶ್ರೀಮನ್ನಿಜಗುಣಶಿವಯೋಗಿಗಳು ಕನ್ನಡನಾಡಿನ ವಿಖ್ಯಾತ ದಾರ್ಶನಿಕರು. ಅವರ ಕೃತಿಗಳನ್ನು ಮೆಚ್ಚದ ಕನ್ನಡಿಗರಿಲ್ಲ ಅಷ್ಟೇಕೆ ಅವರ ಕೃತಿಯ ಒಂದು ಪಲ್ಲವಿಯನ್ನಾದರೂ ಕೇಳದ ಕನ್ನಡಿಗನಿಲ್ಲವೆಂದರೆ ಉತ್ಪ್ರೇಕ್ಷೆಯಲ್ಲ. ಆದರೂ ಅವರ ಚಿತ್ರವನ್ನು ತಿಳಿಯುವ ಸುಲಭಸಾಧನವಿರಲಿಲ್ಲ. ನನಗೆ ಇವರ ಕೃತಿಗಳಲ್ಲಿ ಬಾಲ್ಯದಿಂದಲೂ ಅಭಿರುಚಿ. ಆದರೆ ಅವನ್ನು ಆಳವಾಗಿ ಅಭ್ಯಾಸ ಮಾಡಲು ಶುದ್ಧಪ್ರತಿಗಳು ಲಭ್ಯವಾಗುತ್ತಿಲ್ಲ. ಆದರೂ ಸಿಕ್ಕಿದ ಹಳೆಯ ಪ್ರತಿಗಳನ್ನೇ ಓದಿ ಆನಂದಪಟ್ಟು ಅದರ ಸವಿಯನ್ನು ಹತ್ತಾರು ಜನರ ಮುಂದಿಡುವ ಹಂಬಲ ನನಗೆ ಬಹುದಿನ ಗಳಿಂದಲೂ ಇತ್ತು.

ಅದಕ್ಕೆ ಪೋಷಕವಾಗಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ಶಾಖೆಯ ಔದಾರ್ಯದಿಂದ, ಸಾಗರದಲ್ಲೂ, ಹಲಗೂರು ಗ್ರಾಮದಲ್ಲೂ ಮತ್ತು ಮೈಸೂರು ನಗರದ ಕರ್ಣಾಟಕ ಸಂಘದಲ್ಲೂ ಭಾಷಣ ಮಾಡುವ ಸುಯೋಗವು ಒದಗಿ ಬಂದಿತು. ನಿಜಗುಣರನ್ನು ಅರಿಯುವುದಕ್ಕೆ ಜನರಲ್ಲಿದ್ದ ಕುತೂಹಲ ನನ್ನ ಆಸಕ್ತಿಯನ್ನು ಹೆಚ್ಚಿಸಿತು. ಅದರ ಪರಿಣಾಮವಾಗಿ ಈ ಕೃತಿ ರೂಪವೆತ್ತಿದೆ. ಷಟ್‌ಶಾಸ್ತ್ರಗಳ ಆಚಾರ್ಯರೆನಿಸಿದ ನಿಜಗುಣರನ್ನೂ ಅವರ ಕೃತಿಗಳ ಸಾರಸರ್ವಸ್ವವನ್ನೂ ಈ ಪುಟ್ಟ ಪುಸ್ತಕದಲ್ಲಿ ವಿವರಿಸುವುದು ಅಸಾಧ್ಯ. ಆದರೂ 'ಕನ್ನಡಿಯಲ್ಲಿ ಕರಿಯಡಗಿದಂತೆ' ಅವರ ಕೃತಿಯ ಸೂಕ್ಷ್ಮ ಪರಿಚಯ ಮಾಡಿಕೊಡುವ ಪ್ರಯತ್ನ ನಡೆದಿದೆ.

ಉದ್ಧಾಮ ಕೃತಿಗಳನ್ನು ರಚಿಸಿದ ನಿಜಗುಣರ ನಿಜಜೀವನ ಚರಿತ್ರೆಯು ನನಗೆ ಲಭ್ಯವಾಗುತ್ತಿಲ್ಲ. ಜನಜನಿತವಾದ ಕಥೆಯು ಅವರ ವಿಷಯದಲ್ಲಿ ಅಸ್ಪಷ್ಟಚಿತ್ರವನ್ನು ಕೊಡುತ್ತದೆ. ಕಾವ್ಯಕವಿಯ ಮನೋಭಾವನೆಯ ಪ್ರತೀಕ. ಅಂತೆಯೇ ಕಥೆಯೂ ಸಹ ಅಂದಿನ ಜನಮನಭಾವನೆಯ ಪ್ರತೀಕ. ಜನರು ಅವರನ್ನು ನೋಡಿದ ದೃಷ್ಟಿ ಮತ್ತು ಅವರು ಜನಸಮುದಾಯದ ಮೇಲೆ ಬೀರಿದ ಪ್ರಭಾವ ಮುಂತಾದ ಗಹನವಿಷಯಗಳ ಅರಿವಿಗೆ ಜನ ಜನಿತ ಕಥೆಗಳು ಸಹಾಯವಾಗುತ್ತವೆ. ಆದುದರಿಂದ ಅವರ ಜೀವನದ ಕಥೆಯನ್ನೂ ಈ ಕೃತಿಯಲ್ಲಿ ಸಂಗ್ರಹರೂಪದಲ್ಲಿ ಬರೆಯಲಾಗಿದೆ.

ಈ ಕೃತಿಯ ವಿಷಯದಲ್ಲಿ ಪ್ರಸಾರಾಂಗದ ಡೈರೆಕ್ಟರ್‌ರವರಾದ ಡಾ॥ ಪ್ರಭುಶಂಕರ್‌ರವರೂ, ಡಾ॥ ಎಚ್. ತಿಪ್ಪೇರುದ್ರಸ್ವಾಮಿ ಯವರೂ, ಶ್ರೀ ಪರಮೇಶ್ವರಭಟ್ಟರೂ ಉದಾತ್ತಸಲಹೆಗಳನ್ನಿತ್ತು ಸಹಕರಿಸಿದ್ದಾರೆ. ಅವರಿಗೆ ತುಂಬಾ ಋಣಿಯಾಗಿದ್ದೇನೆ. ಪ್ರಸಾರಾಂಗದ ಇಲಾಖೆಯವರು ನನ್ನ ಈ ಕೃತಿಪ್ರಕಟನೆಗೆ ನೆರವಾದುದಕ್ಕೆ ಕೃತಜ್ಞತೆಯನ್ನು ಸೂಚಿಸಬಯಸುತ್ತೇನೆ.

ತಾ॥ ೧೫–೪–೧೯೬೭

ಮೈಸೂರು

ಎಚ್. ಗಂಗಾಧರನ್

## ವಿಷಯಾನುಕ್ರಮಣಿಕೆ

## ೧. ಭೂಮಿಕೆ

ನರಜನ್ಮದಿಂದಿಹದೊಳು ಮಿಗಿಲುಂಟೆ।

...................................

ವಿರತಿಯಿಂದಿತರ ಸಂಪದ ಸುಖವುಂಟೆ।

...................................

"ಕೈವಲ್ಯಪದ್ಧತಿ"

ಜಗನ್ನಿಯಾಮಕನಾದ ಪರಮಾತ್ಮನ ಸೃಷ್ಟಿಯಲ್ಲಿ ಕೋಟ್ಯಂತರ ಜೀವರಾಶಿಗಳು ಬಾಳಿ ಅಳಿಯುತ್ತವೆ. ಮಾನವನಿಗಿಂತ ನೂರ್ಮಡಿಯಾದ ದೇಹಬಲವುಳ್ಳ ಪ್ರಾಣಿಗಳು, ಸುಂದರತಮ ಮೃಗಪಕ್ಷಿಗಳು ಲೋಕದಲ್ಲಿ ಜನಿಸಿವೆ. ಮಾನವನಿಗಿಂತ ಕ್ರೂರಜಂತುಗಳು, ಸಾಧುಪ್ರಾಣಿಗಳು, ಜೀವಹೊತ್ತು ಅಳಿಯುತ್ತವೆ. "ಆನೆ ಸತ್ತರೂ ಸಾವಿರ ಬದುಕಿದರೂ ಸಾವಿರ" ಎನ್ನುವ ನಾಣ್ಣುಡಿಯೊಂದಿದೆ. ಮಾನವಜೀವಿಗಿಂತ ಶಕ್ತಿಯಲ್ಲಿ ಗಾತ್ರದಲ್ಲಿ ದೊಡ್ಡದೆನಿಸಿದ ಪ್ರಾಣಿ ಆನೆ. ಆನೆಗೆ ಸತ್ತರೂ ಬದುಕಿದ್ದರೂ ಬೆಲೆ ಸಿಕ್ಕುತ್ತದೆ. ಸಾಧುವಾದ ಗೋವಿನಿಂದ, ಬದುಕಿದ್ದಾಗ ಅಮೃತ ದೊರೆಯುತ್ತದೆ. ಗೋವು ತಾನಿಟ್ಟ ಕಸ ನೊಸಲ ವಿಭೂತಿಯಾಗುತ್ತದೆ. ಜೀವ ಹೋದಮೇಲೆ ಚರ್ಮ ನಮ್ಮ ಪಾದರಕ್ಷೆಯಾಗುತ್ತದೆ. ಆದರೆ ಮಾನವದೇಹದಲ್ಲಿ ಜೀವವಿರುವವರೆಗೆ ಅವನಿಗೆ ಬೆಲೆಗಟ್ಟುವುದೇ ಅಸಾಧ್ಯ. ಆದರೆ ಜೀವಪಕ್ಷಿ ಹಾರಿದ ಮೇಲೆ ದೇಹ ನಿರುಪಯುಕ್ತ. ಭಗವಾನ್ ಬಸವಣ್ಣನವರು "ವ್ಯಾಧನೊಂದು ಮೊಲವ ಕೊಂದು ತಂದರೆ ಪಲವ ಹಾಗಕ್ಕೆ ಬೆಲೆಗೈವರಯ್ಯ. ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬವರಿಲ್ಲ ನೋಡಯ್ಯ! ಮೊಲನಿಂದ ಕರಕಷ್ಟ ನರನ

ಬಾಳುವೆ! ಸಲೆ ನಂಬೋ ಕೂಡಲಸಂಗಮದೇವ" ಎಂಬುದಾಗಿ ಮಾನವತೆಯ ಚಿತ್ರವನ್ನು ಅತ್ಯಂತ ಸುಂದರ ಉಪಮೆಯೊಡನೆ ತಿಳಿಸಿದ್ದಾರೆ. ಸೃಷ್ಟಿಯಾದಂದಿನಿಂದ ಮಾನವನಿಗೆ ಈ ಸಂದೇಶದ ಅನುಭವವಾಗುತ್ತಲೇ ಇದೆ. ಆದರೆ ಈ ಅನುಭವವನ್ನು ಮಾನವ ಎಷ್ಟರಮಟ್ಟಿಗೆ ಜೀವನದಲ್ಲಿ ಅಳವಡಿಸಿಕೊಂಡಿದ್ದಾನೆಂಬುದೇ ನಮ್ಮ ಮುಂದಿರುವ ನಿತ್ಯಪ್ರಶ್ನೆ? ಈ ಪ್ರಶ್ನೆಯನ್ನು ಉತ್ತರಿಸು ವುದೇ ಜೀವನದ ಮುಖ್ಯಗುರಿ!

ಇಂತಹ ಒಂದು ಪ್ರಶ್ನೆಯನ್ನು ಮುಂದಿಟ್ಟುಕೊಂಡು ಅದಕ್ಕೆ ಉತ್ತರವನ್ನು ಹುಡುಕಿ ಕಂಡುಕೊಳ್ಳುವ ಮಹಾಶಕ್ತಿ ಅನಂತ ಜೀವರಾಶಿಗಳಲ್ಲಿ ಮನುಷ್ಯನೊಬ್ಬನಿಗೇ ಲಭ್ಯವಾಗಿದೆ. ಉಪನಿಷತ್ತಿನಲ್ಲಿ ಒಂದು ಕಥೆಯಿದೆ. "ತ್ರಿಮೂರ್ತಿಗಳಲ್ಲಿ ಸೃಷ್ಟಿಕರ್ತ ನೆನಿಸಿದ ಬ್ರಹ್ಮದೇವ ಬ್ರಹ್ಮಾಂಡವನ್ನೆಲ್ಲಾ ನಿರ್ಮಿಸಿದ. ಸಕಲ ಚರಾಚರವಸ್ತುಗಳ ಸೃಷ್ಟಿಯಾಯಿತು. ಆದರೂ ಮನಸ್ಸಿಗೆ ನೆಮ್ಮದಿಯಿಲ್ಲ. ಏನೋ ಕೊರತೆ. ಸ್ಥಿತಿಕರ್ತನಾದ ವಿಷ್ಣುವಿನ ಬಳಿಗೆ ತೆರಳಿ ವಿಚಾರಮಾಡಿದ. ಸಮಾಧಾನ ದೊರೆಯಲಿಲ್ಲ. ಇಬ್ಬರೂ ಲಯಕರ್ತನ ಬಳಿಗೆ ತೆರಳಿದರು. ಮೂವರೂ ಬಹು ಕಾಲ ಆಲೋಚಿಸಿದರು. ಆಗ ಅವರ ಮನಸ್ಸಿಗೆ ಏನೋ ಹೊಳೆ ಯಿತು. ಮಾನವನ ಸೃಷ್ಟಿಯಾಯಿತು. ಈ ಸೃಷ್ಟಿ ತ್ರಿಮೂರ್ತಿ ಗಳಿಗೆ ಸಮಾಧಾನವನ್ನು ತಂದಿತು." ಮಾನವಸೃಷ್ಟಿಯಲ್ಲಿ ಅಷ್ಟೇನು ವೈಶಿಷ್ಟ್ಯ! ಇದನ್ನು ಉಪನಿಷತ್ಕಾರರು ವಿಚಾರಮಾಡಿ ದ್ದಾರೆ. ಅರ್ಥವಾದಾಗ ಆನಂದಪಟ್ಟಿದ್ದಾರೆ. ತಮಗಾದ ಆನಂದದ ಅಮೃತವನ್ನು ಉಪನಿಷತ್ತಿನ ಮೂಲಕ ನಮಗೆ ದಾನಮಾಡಿ ದ್ದಾರೆ. ಇದೊಂದು ಗಹನವಿಷಯವೆಂದು ಸಾರಿದ್ದಾರೆ. ಮಾನವ ನಿಗೆ ತಾನಾರು? ಎಂಬುದನ್ನು ವಿಚಾರಮಾಡುವ ಶಕ್ತಿಯಿದೆ.

ವಿಚಾರಹೀನನಾದರೆ ಮಾನವ ದಾನವನಾಗುತ್ತಾನೆ. ವಿಚಾರರಹಿತನಾಗಿ ಮೆರೆದರೆ ಮಾನವ ಅನ್ಯಪ್ರಾಣಿಗಳಂತೆ ತಾನೊಂದು ಪ್ರಾಣಿಯಾಗಿಯೇ ಉಳಿಯುತ್ತಾನೆ. ವಿಚಾರವಂತನಾಗಿ ಆಚಾರಶೀಲನಾದರೆ ದೇವನೇ ತಾನಾಗುತ್ತಾನೆ. ಈ ಮಹಾಸಂಪತ್ತು ಮಾನವಜೀವಿಗಲ್ಲದೆ ಅನ್ಯಜೀವಿಗೆ ಲಭ್ಯವಲ್ಲ.

ಈ ಮಹಾ ಸಂಪತ್ತಿನ ಸದುಪಯೋಗಹೊಂದಿದ ಮಾನವರು ಮಹಾನುಭಾವರು, ಅಮರರು. ಆದುದರಿಂದಲೇ ಅವರ ವಾಣಿ ಅವರ ಜೀವನ ಅಖಂಡ ಮಾನವತೆಗೆ ನಿತ್ಯ ದಾರಿದೀಪವಾಗಿ ಅನಂತಕಾಲ ಉಳಿಯುತ್ತದೆ. ಹೀಗೆ ಅಮರರೆನಿಸಿದವರು ಈ ಪೃಥ್ವಿಯಮೇಲೆ ಅನಂತಜನ ಜನಿಸಿದರು. ಅಂತಹವರಲ್ಲಿ ಕನ್ನಡನಾಡಿನ ಕೀರ್ತಿ ಶ್ರೀಗೆ ಕಾರಣರಾದ ನಿಜಗುಣಶಿವಯೋಗಿಗಳು ಒಬ್ಬರು. ಅವರ ಜೀವನವನ್ನು ಅವರ ಕೈವಲ್ಯಪದ್ಧತಿ ಕೃತಿಯಲ್ಲಿ ಬರುವ ಮೇಲಿನ ಎರಡು ವಾಕ್ಯಗಳಿಂದಲೇ ಚಿತ್ರಿಸಬಹುದು. ಅವರ ಅರಿವಿನ ಮೊದಲ ಮೆಟ್ಟಲು "ನರಜನ್ಮದಿಂದಿಹದೊಳು ಮಿಗಿಲುಂಟೆ" ಎಂಬುದು. ಈ ಜನ್ಮವನ್ನು ಕಡೆಗಾಣಿಸಿದವರಲ್ಲ. ಹೇಯವೆಂದು ಭಾವಿಸಿದವರಲ್ಲ. ಇದೊಂದು ವರವೆಂದು ಅರಿತವರು. ಆದುದರಿಂದಲೇ ಸೃಷ್ಟಿಯಲ್ಲಿ ಅಮೋಘ ಸ್ಥಾನವನ್ನು ನರಜನ್ಮಕ್ಕೆ ಕೊಟ್ಟಿದ್ದಾರೆ. ಆದರೆ ಅದು ಅಂತಹ ಹಿರಿಮೆಗೆ ಕಾರಣವಾಗುವುದು ಯಾವಾಗ? ಸುಂದರವಾದ ದೇವಸೌಷ್ಟವವನ್ನು ಹೊಂದಿದಾಗಲೇ? ಅನಂತ ಬಂಧುಬಳಗದಿಂದ ಕೂಡಿದಾಗಲೇ? ಅಪಾರ ಭೌತಿಕ ಸಂಪತ್ತಿನಿಂದ ಕೂಡಿದಾಗಲೇ? ಅಥವಾ ಮತ್ತೊಬ್ಬ ಮಾನವನ ಮೇಲೆ ಅಧಿಕಾರವನ್ನು ನಡೆಸುವ ಸಾಮ್ರಾಟನಾದಾಗಲೋ? ಇವೊಂದರಿಂದಲೂ ಅಲ್ಲ. ಇವು ಯಾವುದೂ ನಿಜವಾದ ಸಂಪತ್ತಲ್ಲ. ಇದನ್ನು ಅವರು ತಮ್ಮ

ಜೀವನಸಾಧನೆಯಲ್ಲಿ ಅರಿತುಕೊಂಡರು, ಅನುಭವಕ್ಕೆ ತಂದುಕೊಂಡರು. ಈ ಅನುಭವಾನಂದವನ್ನು ಪುತ್ತೊಂದು ಸುಂದರ ವಾಕ್ಯದಲ್ಲಿ ನಮಗಿತ್ತಿದ್ದಾರೆ. "ವಿರತಿಯಿಂದಿತರ ಸಂಪದಸುಖಮುಂಟೆ" ಎಂದಿದ್ದಾರೆ. ಮೇಲೆ ಹೇಳಿದ ಎಲ್ಲ ಪ್ರಾಪಂಚಿಕ ಭಾಗ್ಯವೂ ಅವರಿಗಿತ್ತು. ಅವು ಅವರಿಗೆ ಸುಖಸಂಪತ್ತಾಗಲಿಲ್ಲ. ವೈರಾಗ್ಯವೇ ನಿಜವಾದ ಸುಖವೆಂದು ಅರಿತು ವೀರ ಶಿವಯೋಗಿಯೆನಿಸಿದರು. ತಮಗಾದ ಆನಂದವನ್ನು ಲೋಕಕ್ಕೆ ನೀಡಿದರು. ಅದನ್ನು ಪಡೆದು ಅನುಭವಿಸಲಾರದವರನ್ನು ಕಂಡು ಮರುಗಿದರು. ಮಾನವತೆಯ ಪರಿಸ್ಥಿತಿಯನ್ನು ಕಂಡು ಅಭಿಮಾನದಿಂದ ಹೇಳಿದರು—

ಸುಮ್ಮನೆ ಕಾಲವನೆ ಕಳೆದು ಸಾವುದುಚಿತವೆ ।
ನಿಮ್ಮನಿಜವನು ಮುಕ್ತಿ ಪಡೆಯದೆ ಮನುಜನೀ ॥

"ಕೈವಲ್ಯಪದ್ಧತಿ"

ಎಂದು ಅರುಹಿದರು.

ತಮ್ಮ ಅರಿವಿನ ಹಿರಿಮೆಯಿಂದ ತಾವೊಬ್ಬರು ಮುಕ್ತರಾಗಬಹುದು. ಅಂತೆಯೇ ಈ ಸೃಷ್ಟಿಯಲ್ಲಿ ಎಷ್ಟೋಜನ ಮುಕ್ತರಾಗಿರಬಹುದು. ಅವರಿಂದ ಲೋಕಕ್ಕೆ ಯಾವ ಪ್ರಯೋಜನವೂ ಇಲ್ಲ. ಆದರೆ ಅನ್ಯರನ್ನೂ ತಮ್ಮಂತೆ ಮುಕ್ತಿಪಡೆಯಲು ದಾರಿ ತೋರಿಸಿದವರು ಮಾತ್ರನೇ ನಿಜವಾಗಿ ಮುಕ್ತರು. ಅಂತಹವರ ಮುಕ್ತಿಗೆ ಮಾತ್ರವೇ ಈ ಲೋಕದಲ್ಲಿ ಮಾನ್ಯತೆ. ನಿಜಗುಣ ಶಿವಯೋಗಿಗಳು ಇಡೀ ಮಾನವತೆಯೇ ಮುಕ್ತಿಪಡೆಯಲೆಂದು ಆಶಿಸಿದರು. ಅದರ ಪರಿಣಾಮವೇ ಅವರ ಅಪಾರ ಕಾವ್ಯರಾಶಿ, ಅನುಭವದ ಸಾಗರ. ಕನ್ನಡದ ಜ್ಞಾನಭಂಡಾರಕ್ಕೆ ಅನರ್ಘ್ಯ ರತ್ನಕಳಸವಿಟ್ಟರು.

ಕಾವ್ಯಗಳನ್ನು ರಚಿಸಿದವರು ಕವಿಗಳು, ತತ್ವವನ್ನು ಬೋಧಿಸಿದವರು ಧರ್ಮಗುರುಗಳು. ನಿಜಗುಣಶಿವಯೋಗಿಗಳಂತೆ ಅನಂತ ಕಾವ್ಯಗಳನ್ನು ರಚಿಸಿದ ಮಹಾಕವಿಗಳು ಕನ್ನಡ ನಾಡಿನಲ್ಲಿ ಬಹುಜನರಾಗಿಹೋಗಿದ್ದಾರೆ. ಅನಂತ ತತ್ವಗಳನ್ನು ಸಾರಿದ ಧರ್ಮಜ್ಞಾನಿಗಳೂ ಲೋಕದಲ್ಲಿ ಬಹಳ. ಆದರೆ ನಿಜಗುಣಶಿವಯೋಗಿಗಳ ಕೃತಿ ಎಲ್ಲರಿಗಿಂತಲೂ ವಿಶಿಷ್ಟ. ಏಕೆಂದರೆ ಎಷ್ಟೋ ಮಹಾಕಾವ್ಯಗಳನ್ನು ಓದಿ ನಾವು ಆನಂದಪಡುತ್ತೇವೆ. ನಮ್ಮಂತೆಯೇ ಆ ಕವಿಗಳಿಗೂ ಕಾವ್ಯಾನಂದವಾಗಿರಬಹುದು. ಆದರೆ ಎಷ್ಟುಜನ ಕಾವ್ಯಾನಂದದಿಂದ ಮುಂದೆ ಹೋಗಿ ಆತ್ಮಾನಂದವನ್ನು ಪಡೆದಿದ್ದಾರೆ! ಅದು ವಿಚಾರಾಸ್ಪದ. ಅಲ್ಲದೆ ಅಮರಕಾವ್ಯಗಳನ್ನು ಸೃಜಿಸಿದ ಮಹಾನುಭಾವರು ಅನೇಕರು ರಾಜಾಶ್ರಯವನ್ನು ಪಡೆದು ರಾಜರ ಒಲುಮೆಗೋ ಅಥವಾ ಪ್ರತಿಭೆಯ ಪ್ರದರ್ಶನಕ್ಕೋ ಕಾವ್ಯವನ್ನು ಬರೆದಿಟ್ಟರು. ಆದರೆ ನಿಜಗುಣರು ಸ್ವತಃ ರಾಜರಾಗಿ ರಾಜತ್ವವನ್ನು ತ್ಯಜಿಸಿ ಶಿವಯೋಗಿಯಾದರು. ಆದುದರಿಂದ ಅವರ ಕೃತಿಗೆ ಮಹತ್ವವಿದೆ. ಅವರ ಕಾವ್ಯಗಳಲ್ಲಿ ಜ್ಞಾನಪ್ರಚೋದಕ ಮೋಕ್ಷಪ್ರದಾಯಕ ದರ್ಶನವಿದೆ. ಲೋಕಾಭ್ಯುದಯ ಸಂದೇಶವಿದೆ. ಆದರೆ ಅವರಂತೆಯೇ ಧರ್ಮಜ್ಞರಾಗಿ ಇದೇ ರೀತಿಯ ಲೋಕೋತ್ತರ ವಾಣಿಯನ್ನು ಬಿತ್ತರಿಸಿದವರು ಲೋಕದಲ್ಲಿ ಬಹುಜನರಿರಬಹುದು. ಆದರೆ ಅವರೆಲ್ಲರಿಗೂ ತಮ್ಮದೇ ಆದ ಪಂಥವನ್ನು ನಿರ್ಮಿಸುವ ಆಕಾಂಕ್ಷೆ; ಅದಕ್ಕಾಗಿ ಲೋಕಕ್ಕೆಲ್ಲಾ ನಾನೇ ಮೇಲೆಂಬ ಮನೋಭಾವನೆ ಮನೆಮಾಡಿಕೊಂಡಿರುವುದನ್ನು ನಾವು ಇತಿಹಾಸದಿಂದ ತಿಳಿಯಬಹುದು. ನಿಜಗುಣಶಿವಯೋಗಿ ಯಾವುದೇ ಪಂಥದ ಪ್ರಚೋದಕರಲ್ಲ, ಪ್ರಚಾರಕರೂ ಅಲ್ಲ. ಸರ್ವರಲ್ಲಿಯೂ ಸರ್ವದರಲ್ಲಿಯೂ ಸತ್ಯ

ವನ್ನು ಸೌಂದರ್ಯವನ್ನು ಕಂಡವರು. ಅದನ್ನು ಉಂಡು ಅನುಭವಿಸಿದವರು. ಆದುದರಿಂದಲೇ ಅವರ ಕೃತಿಗೆ ಅಮರತ್ವ ವಿರುವುದು.

ಒಂದು ಕಾಲದಲ್ಲಿ ಅವರ ಕೃತಿಯು ವಾಣಿ ಕನ್ನಡನಾಡಿನ ಮನೆಗಳಲ್ಲಿ ಪ್ರತಿಯೊಬ್ಬರ ನಿತ್ಯಜೀವನದಲ್ಲಿ ಪ್ರತಿಧ್ವನಿಸುತ್ತಿತ್ತು. ಬೀದಿಯಲ್ಲಿ ಬರುವ ಭಿಕ್ಷುಕ ಏಕನಾದವನ್ನು ಹಿಡಿದು ಅವರ ಅಮರ ಕಾವ್ಯವನ್ನು ಹಾಡುತ್ತಿದ್ದ. ವಿಲಾಸಕ್ಕೆ ಬಂದ ವಿಟ ಪುರುಷನ ಮುಂದೆ ವೇಶ್ಯಾಂಗನೆಯೂ ಹಾಡಿ ಆನಂದಿಸುತ್ತಿದ್ದಳು. ಧರ್ಮಸಂರಕ್ಷಕರಾದ ಪೀಠಾಧೀಶರು ಅವರನ್ನು ಸ್ಮರಿಸಿ ಶಿಷ್ಯ ಕೋಟಿಯನ್ನು ಹರಸುತ್ತಿದ್ದರು. ನೇಗಿಲಯೋಗಿ ಅವರ ಕೃತಿ ಯನ್ನು ಹಾಡುತ್ತಾ ದುಡಿಯುವಾಗ ಆಯಾಸವನ್ನು ಮರೆಯು ತ್ತಿದ್ದ. ಅಳುವ ಶಿಶುವಿನ ಮುಂದೆ ಹಾಡಿ ತಾಯಿ ಮಗನನ್ನು ಮಲಗಿಸುತ್ತಿದ್ದಳು. ಇಂತಹ ಭವ್ಯಚಿತ್ರ ಇಂದು ಕಣ್ಮರೆ ಯಾಗುವುದು ಶೋಚನೀಯ. ಅಖಂಡ ಮಾನವತೆಯ ಅಭ್ಯು ದಯಕ್ಕೆ ಅಮೃತಧಾರೆಯೆರೆದ ಮಹಾನುಭಾವಿ ನಿಜಗುಣಶಿವ ಯೋಗಿಯನ್ನು ಸ್ಮರಿಸದಿದ್ದರೆ ಕನ್ನಡಿಗರ ಬದುಕಿಗೆ ಅರ್ಥವಿಲ್ಲ.

ನಿಜಗುಣರ ಜೀವನ ಭವ್ಯವಾದುದು. ತ್ಯಾಗ ಯೋಗ ವೈರಾಗ್ಯ ಗಳ ತ್ರಿವೇಣೀ ಸಂಗಮವನ್ನು ಅವರ ಜೀವನದಲ್ಲಿ ಕಾಣ ಬಹುದು. ಅವರ ಕಾವ್ಯಾಮೃತದ ಸರೋವರದಲ್ಲಿ ಮಿಂದು ನಾವು ಪಾವನರಾಗಬಹುದು. ಮಾನವತೆಯ ಆತ್ಮೋನ್ನತಿಗೆ ಅಮರ ಸಂದೇಶದ ಧಾರೆಯನ್ನೆರೆದ ಮಹಾನುಭಾವರ ಸಾಧನೆಯ ಫಲವೇ ಆಧ್ಯಾತ್ಮಿಕ ಸಂಪತ್ತು. ಈ ಸಂಪತ್ತು ಭಾರತದ ಹಿರಿ ಮೆಗೆ ಕಾರಣವಾದ ಶಕ್ತಿ. ಜೀವನದ ವಿವಿಧ ರೂಪಗಳಾದ ತತ್ವ, ಕಲೆ, ಸಂಗೀತ, ಸಾಹಿತ್ಯ, ಶೀಲ, ಜ್ಞಾನ, ವಿಜ್ಞಾನ ಇವೆಲ್ಲ

ಏಕೆ, ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳ ಅಂತರಾಳದಲ್ಲಿ ಗುಪ್ತಗಾಮಿನಿಯಾಗಿ ಸುಪ್ತ ಚೇತನವಾಗಿ ಪ್ರವಹಿಸಿದ ಆಧ್ಯಾತ್ಮಶಕ್ತಿ ಭಾರತದ ಪ್ರತಿಭಾಶಕ್ತಿಯ ಜೀವಾಳ. ಈ ಜೀವಶಕ್ತಿಯನ್ನು ಕಳೆದುಕೊಂಡ ಮೇಲೆ ನಾವು ನಿಯೋಜಿಸುವ ಎಲ್ಲ ಶತಮಾನಗಳ ಯೋಜನೆಗಳೂ ನೀರಸವೂ ನಿರರ್ಥಕವೂ ಆಗುತ್ತವೆ. ಈ ಮಾತು ನಮ್ಮ ಮುಂದೆ ಎಂದಿಗಿಂತ ಇಂದು ಸತ್ಯವಾಗಿ ನಿಂತಿದೆ. ವಿಜ್ಞಾನದ ಬಲದಿಂದ ಮಾನವ ಆಧುನಿಕ ವಿಶ್ವಾಮಿತ್ರನಾಗಿದ್ದಾನೆ. ಆದರೆ ಅವನಂತೆಯೇ ಅಶಾಂತಿಯಲ್ಲಿ ಪರಿತಪಿಸುವಂತಾಗಿದೆ. ಆದುದರಿಂದ ಸಿದ್ಧಪುರುಷರ ಸದ್ವಾಣಿ ನಮ್ಮ ಧಮನಿಗಳಲ್ಲಿ ಪ್ರವಹಿಸಬೇಕು. ಕನ್ನಡಿಗರ ಹೃದಯಮಂದಿರದಲ್ಲಿ ಬೆಳಗಬೇಕು. ಕನ್ನಡಿಗರು ನಿಜಗುಣ ಶಿವಯೋಗಿಯ ಅನರ್ಘ್ಯ ರತ್ನ ಕಾಂತಿಯನ್ನು ಲೋಕಕ್ಕೆ ಬೆಳಗಬೇಕು. ಈ ದೃಷ್ಟಿಯಿಂದ ನಿಜಗುಣರ ಜೀವನದ ಮೇಲೆ ಮತ್ತು ಅವರ ಕೃತಿಗಳನ್ನು ಕುರಿತ ನವ್ಯ ಬೆಳಕನ್ನು ಚಲ್ಲುವ ಅನಂತ ಕೃತಿಗಳು ಹೊರಹೊಮ್ಮಬೇಕು. ಈ ಕಾರ್ಯದಿಂದ ನಾವು ನಿಜಗುಣರನ್ನು ಮಹಾನುಭಾವರಾಗಿ ಮಾಡುವುದಿಲ್ಲ. ನಾವು ಮಾನವತ್ವದಿಂದ ಮೇಲೇರಿ ಮಹಾನುಭಾವರಾಗಲು ಸಾಧ್ಯವಾದೀತು. ಕನ್ನಡಿಯನ್ನು ನೋಡಿಕೊಳ್ಳುವವರು ತಮ್ಮ ಸೌಂದರ್ಯವನ್ನು ನೋಡಿಕೊಳ್ಳುವರಲ್ಲದೆ ಕನ್ನಡಿಯ ಸೌಂದರ್ಯವನ್ನು ನೋಡಬಯಸುವರೆ !

ಶಿವಯೋಗಿಗಳ ಜೀವನಚಿತ್ರ ಅಸ್ಪಷ್ಟ. ಅವರ ಕಾಲ ಸಾಂಸಾರಿಕ ಕ್ಷೇತ್ರ ಇವೂ ಸಹ ಇನ್ನೂ ಅನಿಶ್ಚಿತ. ಅನೇಕ ದಂತಕಥೆಗಳು ರೂಪಾಂತರ ಹೊಂದುತ್ತಾ ಸರಳುತ್ತಾ ಹೊರ

ಳುತ್ತಾ ಉಳಿದುಬಂದಿವೆ. ಅವುಗಳಿಂದ ನಿಜಗುಣರ ವ್ಯಕ್ತಿತ್ವವನ್ನು ಅವಲೋಕಿಸುವುದು ಅಪ್ರಮಾಣಿಕವೂ ಅಪಚಾರವೂ ಆಗಬಹುದು. ಆದರೆ ಮಧುರವೂ ಪುಷ್ಟಿಕರವೂ ಆದ ಅಮೃತವೂ ನವನೀತವೂ ದೊರೆತಿರುವಾಗ ಅದನ್ನು ಅನುಭವಿಸದೆ ಅದನ್ನಿತ್ತ ಆಕಳ ಚರಿತ್ರೆಯಿಂದ ನವನೀತದ ಸವಿಯನ್ನು ನಿರ್ಧರಿಸುವುದು ಉಚಿತವಲ್ಲ. ಈ ದೃಷ್ಟಿಯಿಂದ ಅವರ ಜೀವನ ಮತ್ತು ಕಾಲಗಳ ಗೊಂದಲಕ್ಕಿಂತಲೂ ಅವರ ಅಮೃತಧಾರೆಯ ವಿಚಾರ ಮಾಡುವುದು ಬಹು ಮುಖ್ಯ, ಎಂದೇ ಇಲ್ಲಿ ಅವರ ಕೃತಿಗಳ ಸೂಕ್ಷ್ಮ ಪರಿಚಯಕ್ಕೆ ಪ್ರಯತ್ನಮಾಡಿದೆ. ಅದೂ ಕನ್ನಡಿಯಲ್ಲಿ ಕಾಣುವ ಕರಿಯಂತೆ! ಕನ್ನಡದ ಅಭಿಮಾನಿಗಳೂ ಆತ್ಮಜ್ಞಾನದ ಅನುಭಾವಿಗಳೂ ಮೋಕ್ಷಾಪೇಕ್ಷಿಗಳೂ ಅವರ ಕೃತಿ ಸಾಗರದಲ್ಲಿ ಮಿಂದು ಧನ್ಯರಾಗಲು ಸರ್ವರಿಗೂ ನೆರವಾಗಲೆಂಬ ಅಪೇಕ್ಷೆಯೇ ಈ ಕನ್ನಡಿಯ ಉದ್ದೇಶ. ಆದುದರಿಂದ ಕನ್ನಡಿಯಲ್ಲಿ ಆನೆಯ ಪೂರ್ಣವಾದ ನಿಜವಾದ ರೂಪವನ್ನು ಕಾಣಲಿಲ್ಲವೆಂಬ ಶಂಕೆಗೆ ಕಾರಣವಿಲ್ಲವಷ್ಟೆ!

## ೨. ಜೀವನಕಥೆ

ನಿಜಗುಣಶಿವಯೋಗಿಗಳ ಪೂರ್ವೇತಿಹಾಸವನ್ನು ನಿಶ್ಚಿತ ಆಧಾರಗಳಿಂದ ನಿರ್ಧರಿಸಲು ಅಶಕ್ಯವಾಗಿದೆ. ಅಂತೆಯೇ ಅವರ ಕಾಲಮಾನಗಳಾಗಲಿ ಸ್ಥಾನಮಾನಗಳಾಗಲಿ ನಿರ್ದಿಷ್ಟವಾಗಿ ಗೊತ್ತುಪಡಿಸಿಲ್ಲ. ಆದುದರಿಂದ ಅವರ ಜೀವನ ಒಂದು ಕಥೆಯಾಗಿ ಜನಜನಿತವಾಗಿದೆಯೇ ಹೊರತು ಚರಿತ್ರೆಯಾಗಿ ರೂಪುಗೊಂಡಿಲ್ಲ. ಅವರನ್ನು ಕವಿಯಾಗಿ ಶಿವಯೋಗಿಯಾಗಿ ಸಿದ್ಧಪುರುಷರಾಗಿ, ತತ್ವಜ್ಞಾನಿಗಳಾಗಿ ಮತ್ತು ಪಂಡಿತೋತ್ತಮ

ರಾಗಿ ಕನ್ನಡನಾಡು ಸ್ವೀಕರಿಸಿದೆ. ಚರಿತ್ರೆಯ ವಿಷಯದಲ್ಲಿ ಸಾಕಷ್ಟು ಸಂಶೋಧನೆ ನಡೆದಿದ್ದರೆ ಏನಾದರು ಆಧಾರಗಳು ದೊರೆಯುತ್ತಿದ್ದುವೋ ಏನೋ? ಆದರೆ ಅತ್ತ ಕನ್ನಡ ವಿದ್ವನ್ಮಣಿಗಳ ಗಮನ ಇತ್ತೀಚೆಗೆ ಹರಿಯುತ್ತಿರುವುದು ಸಂತೋಷದಾಯಕ. ನಮ್ಮ ನಾಡಿನ ಬಹುಜನರು ಅವಿದ್ಯಾವಂತರಾದರೂ ನಿಷ್ಠಾವಂತರೂ ಶ್ರದ್ಧಾಳುಗಳೂ ಆದ ಗ್ರಾಮಾಂತರದ ಜನರು. ಅವರ ವಿಷಯದಲ್ಲಿ ತಮ್ಮ ಗಮನಕ್ಕೆ ಬಂದ ಹಲವಾರು ವಿಷಯಗಳನ್ನು ರಕ್ಷಿಸಿಕೊಂಡೇ ಬಂದಿದ್ದಾರೆ. ಅವು ಕಾದಂಬರಿಯ ಕಲ್ಪನೆಗಳಲ್ಲ. ಕವಿಯ ಕುಶಲತೆಯ ಪರಿಣಾಮವೂ ಅಲ್ಲ. ಆದುದರಿಂದ ಈ ಕಥೆಯಲ್ಲಿ ಸಂಪೂರ್ಣ ಸತ್ಯಾಂಶವಿಲ್ಲದಿರಬಹುದು. ಆದರೆ ಆ ಕಥೆಗೆ ಹಿನ್ನೆಲೆಯಾದ ತಾತ್ವಿಕಾಂಶವು ಮಾತ್ರ ಸತ್ಯವೆಂದೇ ಹೇಳಬೇಕಾಗುತ್ತದೆ. ಈ ದೃಷ್ಟಿಯಿಂದ ಜನಜನಿತವಾಗಿರುವ ಕಥೆಯನ್ನೂ ನಾವು ತಿಳಿದಿರುವುದು ಮೇಲು.

ನಮ್ಮ ನಾಡಿನ ಕವಿಗಳು ಮಹಾನುಭಾವರನ್ನು ತಮ್ಮ ಕಾವ್ಯದಲ್ಲಿ ಚಿತ್ರಿಸುವಾಗ ಸಾಮಾನ್ಯವಾಗಿ ಅವರಿಗೆ ಮೊದಲು ದೇವಲೋಕದಲ್ಲಿ ಸ್ಥಾನವನ್ನು ಕಲ್ಪಿಸಿ ಅನಂತರ ಭೂಲೋಕಕ್ಕೆ ಕರೆತರುವುದುಂಟು. ಇದು ನಮ್ಮ ನಾಡಿನ ಎಲ್ಲ ಪ್ರಾಚೀನ ಕಾವ್ಯಗಳಲ್ಲೂ ಎಲ್ಲ ಜಾತೀಯ ಕಾವ್ಯಗಳಲ್ಲೂ ಕಂಡುಬರುತ್ತದೆ. ಅಂತೆಯೇ ನಿಜಗುಣರಿಗೂ ದೇವಲೋಕದ ಸ್ಥಾನ ತಪ್ಪಿಲ್ಲ. ಪುರಾಣಗಳಲ್ಲಿ ಕಂಡುಬರುವ ಅನೇಕ ರುದ್ರರಲ್ಲಿ ಒಬ್ಬನಾದ ಸಹಸ್ರಾಕ್ಷನೆಂಬ ರುದ್ರನು ಶಿವಲೋಕದಲ್ಲಿ ಸುರಕಿಲಗಣೇಶ್ವರನೆಂಬ ಗಂಧರ್ವನಾಗಿದ್ದು ಮಹೇಶ್ವರನ ಆಜ್ಞೆಯಿಂದ ಭೂಲೋಕದಲ್ಲಿ ನಿಜಗುಣಿಯೆಂಬ ಹೆಸರಿನಿಂದ ರಾಜಮನೆ

ತನದಲ್ಲಿ ಜನಿಸಿದನು. ಪೂರ್ವದಲ್ಲಿ ಪಾಳೆಪಟ್ಟುಗಳನ್ನು ಕಟ್ಟಿ ಕೊಂಡು ಊರಿಗೊಬ್ಬ ಕೇರಿಗೊಬ್ಬ ರಾಜರಾಗಿ ಮೆರೆದಿರುವುದು ಇತಿಹಾಸದಿಂದ ಕಂಡುಬರುತ್ತದೆ. ಭಾರತದಲ್ಲಿ ಐದುನೂರಕ್ಕೂ ಮಿಗಿಲಾದ ರಾಜರುಗಳಿದ್ದುದೂ ಅವರಲ್ಲಿ ಕೆಲವರು ಸಣ್ಣ ಪಟ್ಟಣಗಳ ಅಧಿಪತಿಗಳಾಗಿ ಮೆರೆದಿರುವುದೂ ಈ ಭಾರತದ ಸ್ವಾತಂತ್ರ್ಯನಂತರ ಅರಸುತನದ ರಾಷ್ಟ್ರಧಿದೃತೆಯು ಅಳಿಸಿರು ವುದೂ ನಮಗೆಲ್ಲ ತಿಳಿದಿರುವ ಅಂಶ. ಈ ರಾಷ್ಟ್ರದಲ್ಲಿ ಇಷ್ಟೊಂದು ರಾಜರಿದ್ದರೆಂದರೆ ಮುಂದಿನ ಪೀಳಿಗೆ ಆಶ್ಚರ್ಯಪಡಬಹುದು. ಅದರಂತೆ ಕರ್ಣಾಟಕದ ದಕ್ಷಿಣಭಾಗದಲ್ಲಿ ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿಗೆ ಸೇರಿದ ಚಿಲಕವಾಡಿ ಗ್ರಾಮದ ಸುತ್ತ ಮುತ್ತಣ ಪ್ರದೇಶಕ್ಕೆ ನಿಜಗುಣಿಯು ರಾಜನಾಗಿದ್ದನೆಂಬ ಪ್ರತೀತಿ ಇದೆ. ಅಧಿಕಾರದಿಂದ ರಾಜನಾಗಿದ್ದರೂ ಶಿವಭಕ್ತನಾಗಿ ಶಿವಜ್ಞಾನ ಪರಾಯಣನಾಗಿ ಪ್ರಜಾಪ್ರೇಮಿಯಾಗಿ ಬಾಳಿದವನು ನಿಜಗುಣಿ. ಜನಪ್ರೇಮದ ಪ್ರತಿನಿಧಿಯಾಗಿ ಪ್ರಜಾಪ್ರಭುತ್ವಕ್ಕೆ ಮಾನ್ಯತೆಯಿತ್ತು ಆಳಿದವನು ಎಂಬುದನ್ನು ನಾವು ನಂಬಲೇ ಬೇಕಾಗುತ್ತದೆ.

"ಆಚಾರ್ಯದೇವೋಭವ", "ಮಾತಾಪಿತೃದೇವೋಭವ" "ಅತಿಥಿ ದೇವೋಭವ" ಎನ್ನುವ ಈ ಮೂರು ಮಂತ್ರಗಳು ಭಾರ ತೀಯ ಸಂಸ್ಕೃತಿಯ ಅನರ್ಘ್ಯ ರತ್ನತ್ರಯಗಳು. ಯಾರು ಈ ರತ್ನಗಳನ್ನು ಹೃದಯದಲ್ಲಿ ಧರಿಸಿದರೋ ಅವರು ಎಂದೆಂದಿಗೂ ಮಹಾನ ಭಾವರೇ ಆಗಿದ್ದಾರೆ. ನಿಜಗುಣ ಶಿವಯೋಗಿಗಳು ಈ ಸಂಸ್ಕೃತಿಯನ್ನು ಅಕ್ಷರಶಃ ಅಳವಡಿಸಿಕೊಂಡಿದ್ದವರು. ಒಂದು ದಿನ ಶಿವಭಕ್ತಿಸಂಪನ್ನರಾದ ನಿಜಗುಣರು ಆಯುಷ್ಯಪೂರ್ಣಕ್ಕೆ ಕುಳಿ ತಿದ್ದರು. ದಾರಿಹೋಕರಾದ ಜಂಗಮರೊಬ್ಬರು ಹಸಿದು

ಆವರ ಬಳಿ ಬಂದು ಅಶನವನ್ನು ಬೇಡಿದರು. ಅತಿಥಿಯನ್ನು ದೈವನೆಂದು ಭಾವಿಸಿ ತಮ್ಮ ಅರಮನೆಯಲ್ಲಿ ಆನಂದದಿಂದ ಪ್ರಸಾದವನ್ನು ಸ್ವೀಕರಿಸುವಂತೆ ಅವರನ್ನು ಪ್ರಾರ್ಥಿಸಿದರು. ನಿಜಗುಣರಿಗೆ ಇದ್ದ ಸಂಸ್ಕಾರ ಅವರ ಅನುಚರರೆಲ್ಲರಲ್ಲೂ ಇರಬೇಕಷ್ಟೆ! ಸದಾ ತತ್ತ್ವಜ್ಞಾನಾಪೇಕ್ಷಿಯೂ ಜಂಗಮ ಪ್ರೇಮಿಯೂ ಆದ ನಿಜಗುಣರನ್ನು ಅರಿತು ನಡೆವ ಸತಿ ಇದ್ದರೆ ತಾನೆ ಸಂಸಾರದಲ್ಲಿ ಸಮರಸ. ಆದುದರಿಂದಲೇ ಸರ್ವಜ್ಞ ಸುಂದರವಾಗಿ ಹೇಳುತ್ತಾನೆ.

ಬೆಚ್ಚನೆಯ ಮನೆಯಾಗಿ। ವೆಚ್ಚಕ್ಕೆ ಹೊನ್ನಾಗಿ।
ಇಚ್ಛೆಯನು ಅರಿವ-ಸತಿಯಾಗೆ ಸ್ವರ್ಗಕ್ಕೆ।
ಕಿಚ್ಚು ಹಚ್ಚೆಂದ। ಸರ್ವಜ್ಞ॥

ಪತಿಯ ಇಚ್ಛೆಯಂತೆ ನಡೆವ ಸತಿ ಇಲ್ಲದಿದ್ದರೆ ಸಂಸಾರ ಸರ್ಪವಾಗುತ್ತದೆ. ನಿಜಗುಣರಿಗೂ ಸಂಸಾರದಲ್ಲಿ ಇಂತಹ ತೊಂದರೆ ಇದ್ದಿರಬೇಕು. ಜಂಗಮರು ಪ್ರಸಾದಕ್ಕೆಂದು ಅರಮನೆಗೆ ಆಗಮಿಸಿದರು, ಗಳಿಸುವ ಕೈಗಳಿಗಿಂತ ಬಡಿಸುವ ಕೈಗಳು ತೃಪ್ತಿಯನ್ನು ಕೊಡಬಲ್ಲವು. ನಿಜಗುಣರ ಮಡದಿಗೆ ಗಂಡನ ಜಂಗಮ ಪ್ರೇಮ ಹಿಡಿಯಲಿಲ್ಲ. ತಾತ್ಸಾರ ಮನೋಭಾವವನ್ನು ತಳೆದರು. ತಾವಾಗಿ ಮಾಡುವ ಜಂಗಮ ಸೇವೆಗೆ ಆಕೆನ್ನು ಅಟ್ಟಿದರು. ಅರಸಿಗೇ ಬೇಡದ ಕಾರ್ಯದಲ್ಲಿ ಆಳಿಗೇನು ಮಮತೆ! ಅಂತೂ ಜಂಗಮರಿಗೆ ತಂಗಳು ಪದಾರ್ಥದ ನೈವೇದ್ಯವಾಯಿತು. ಜಂಗಮರು ತೃಪ್ತರಾದಂತೆ ಕಾಣಲಿಲ್ಲ. ನಿಜಗುಣರು ಸ್ನಾನ ಪೂಜಾದಿಗಳ ನಂತರ ಪ್ರಸಾದಕ್ಕೆ ಬಂದರು. ಅವರಿಗೆ ಬಿಸಿಬಿಸಿಯಾದ ಭಕ್ಷ್ಯಭೋಜ್ಯಗಳು ಅಣಿಯಾದುವು. ಆಗ ಜಂಗಮರು

ತಂಗಳು ಪದಾರ್ಥವನ್ನು ಸೇವಿಸಿದರೆಂದೂ ತಮಗೆ ಮಧುರ ಭೋಜ್ಯಗಳು ಈಗ ಸಿದ್ಧವಾದುವೆಂದೂ ತಿಳಿಯಿತು. ಇದಕ್ಕೆ ತಮ್ಮ ಪತ್ನಿಯ ತಾತ್ಸಾರಭಾವನೆಯೂ ಕಾರಣವೆಂದು ಗೊತ್ತಾಯಿತು. ಆಗ ಆ ಮೃಷ್ಟಾನ್ನ ಅವರ ಪಾಲಿಗೆ ವಿಷ ವಾಯಿತು. ಗಂಡನ ಸದ್ಗುಣದಲ್ಲಿ ಪಾಲ್ಗೊಳ್ಳದ ಸತಿಯೊಡ ನಿರ್ದು ಫಲವೇನು ? ಎಂಬ ಪ್ರಶ್ನೆ ಅವರಲ್ಲಿ ಮೂಡಿತು. ಈ ಸಂಸಾರ ತ್ಯಾಗಮಾಡಬೇಕೆಂಬುದೇ ಅದಕ್ಕೆ ದೊರೆತ ನಿಶ್ಚಿತ ಉತ್ತರ.

ಮಡದಿಯಲ್ಲಿ ಮತ್ಸರ ಹುಟ್ಟುವುದಕ್ಕೆ ಜಂಗಮನಿಂದೆ ಕಾರಣ ವಾಗಿರಬಹುದು. ಅಥವಾ ಮಡದಿಯು ಗುಣದಿಂದ ಕಳಂಕಿತ ಳಾಗಿರಬಹುದು. ಒಟ್ಟಿನಲ್ಲಿ ಸಂಸಾರ ನಿಜಗುಣರಿಗೆ ವಿಷಸರ್ಪ ವಾಯಿತು. ಅದೇ ಕಾರಣದಿಂದ ಸಂಸಾರವನ್ನು ತ್ಯಜಿಸಿ ಶಂಭು ಲಿಂಗನ ಬೆಟ್ಟದಲ್ಲಿ ಯೋಗಾನುಸಂಧಾನಕ್ಕೆ ತೊಡಗಿದರು. ಮಾನವನ ಜೀವನದಲ್ಲಿ ಕ್ರಾಂತಿಕಾರಕ ಮಾರ್ಪಾಡಾಗಲು ಯಾವುದಾದರೊಂದು ಮಹತ್ವದ ಘಟನೆ ನಡೆದೇ ಇರುತ್ತದೆ. ಆದರೆ ಅಂತಹ ಕಾರಣವೇ ಮೂಲ ಆಧಾರವಾಗುವುದಿಲ್ಲ. ರಾಜ ಕುಮಾರನಾದ ಸಿದ್ಧಾರ್ಥ ಒಬ್ಬ ಭಿಕ್ಷು, ಒಬ್ಬ ರೋಗಿ, ಒಬ್ಬ ವೃದ್ಧ, ಒಂದು ಹೆಣ ಇವುಗಳನ್ನು ಕಂಡು ರಾಜ್ಯಾದಿ ಸಕಲೈಶ್ವರ್ಯ ವನ್ನೂ ತ್ಯಾಗಮಾಡಿ ಕೊನೆಗೆ ಬುದ್ಧನಾದ. ಇವುಗಳನ್ನು ದಿನವೂ ನೋಡುತ್ತೇವೆ. ಆದರೆ ಎಲ್ಲರೂ ಬುದ್ಧರಾಗಲಿಲ್ಲ. ಆದುದರಿಂದ ಈ ಘಟನೆಗಳು ಕೇವಲ ನಿಮಿತ್ತ ಮಾತ್ರ. ಮಹಾನುಭಾವತ್ವದ ಅಂಶ ಜೀವದೊಡನೆ ಕೂಡಿಬಂದ ಜನ್ಮಾಂ ತರದ ಸಂಪತ್ತು. ರಕ್ತಮಾಂಸಗಳಲ್ಲಿ ಹುಟ್ಟಿಬರುವ ಶಕ್ತಿಯಲ್ಲ. ಅನಂತ ಜನ್ಮಗಳ ವಾಸನಾಪುಂಜವಾಗಿ ಅಣುವಾಗಿದ್ದ ದಿವ್ಯಶಕ್ತಿ

ಮಹತ್ತಾಗಲು ಕಾಲ ನಿರೀಕ್ಷಣೆಯಾಗುತ್ತಿರುತ್ತದೆ. ಅಂತೆಯೇ ಯಾವುದೋ ಒಂದು ನಿಮಿತ್ತ ದೊರೆತಾಗ ಅದು ತಾನಾಗಿ ವಿಕಸಿತಗೊಂಡು ಕರುಣಾಳುವಾಗಿ ಕೈಹಿಡಿದು ನಡೆಸುತ್ತದೆ. ಅದರಂತೆ ನಿಜಗುಣರ ಜೀವನದಲ್ಲೂ ಇಂತಹ ನಿಮಿತ್ತಮಾತ್ರದ ಘಟನೆಯೊಂದು ನಡೆದಿದ್ದರೆ ಆಶ್ಚರ್ಯವೇನಲ್ಲ. ಯಾವುದೋ ಒಂದು ಬಾಹ್ಯಕಾರಣ ಅವರ ಅಂತರಂಗದ ಅರಿವನ್ನು ಅರಳಿಸಿರಬೇಕು. ಅಂದೇ ಐಹಿಕವಾದ ಸುಖಸಂಪತ್ತುಗಳನ್ನು ತ್ಯಾಗ ಮಾಡಿದರು. ಅರಮನೆಯನ್ನು ಬಿಟ್ಟು ಗುರುಸನ್ನಿಧಿಯನ್ನು ಸೇರಿದರು. ಶಂಭುಲಿಂಗನ ಬೆಟ್ಟದಲ್ಲಿ ಸಿದ್ಧಪುರುಷರ ಸಹವಾಸದಲ್ಲಿ ಸಾಧನೆಯನ್ನು ಪ್ರಾರಂಭಿಸಿದರು. ಅಪಾರವಾದ ಶಾಸ್ತ್ರರಾಶಿಯನ್ನು ಸಂಗ್ರಹಿಸಿ ಅಭ್ಯಾಸ–ತಪಸ್ಸನ್ನು ಆಚರಿಸಿದರು. ವಿಚಾರಶಕ್ತಿ ಬೆಳೆದು ಆಚಾರದಲ್ಲಿ ನಿಷ್ಠೆ ನೆಲೆಗೊಂಡಿತು. ಪಾಂಡಿತ್ಯ ಪ್ರತಿಭೆ ಪಲ್ಲವಿಸಿತು. ಇದು ನಿಜಗುಣರ ಶಿವಯೋಗ ಸಂಪಾದನೆಯ ಮೊದಲನೇ ಘಟ್ಟ.

ಸಂಸಾರತ್ಯಾಗದಿಂದ ಅರಸಾದ ನಿಜಗುಣರು ಶಿವಯೋಗಿ ಪಟ್ಟವನ್ನೇರಿದರು. ಆದುದರಿಂದ ಶಿವಯೋಗ ಸಂಪ್ರಾಪ್ತಿಗೆ ಸಂಸಾರತ್ಯಾಗ ಮಾಡಲೇಬೇಕೆ ? ಹಾಗಾದರೆ ಸಂಸಾರದಲ್ಲಿರುವವರಿಗೆ ಶಿವಯೋಗ ಪ್ರಾಪ್ತಿಯಾಗುವುದಿಲ್ಲವೆ ? ಎಂಬ ಪ್ರಶ್ನೆಗಳು ಆಧುನಿಕ ವಿಚಾರಶೀಲರ ಮುಂದೆ ಬಂದು ನಿಲ್ಲುತ್ತವೆ. ಸಂಸಾರ ತ್ಯಾಗವೇ ಯೋಗದ ಮೂಲವೆಂದು ಭಾವಿಸಿದರೆ ನಿಜಗುಣರ ಜೀವನದ ಆದರ್ಶವನ್ನು ನಾವು ಅಪಾರ್ಥ ಮಾಡಿಕೊಂಡಂತಾಗುತ್ತದೆ. ಬಂಧುಬಳಗದಿಂದ ಅಧಿಕಾರ ಐಶ್ವರ್ಯದಿಂದ ದೂರವಾಗಿ ದೇಹ ನಿಂತರೆ ಅದು ಯೋಗಮಾರ್ಗವಾಗುವುದಿಲ್ಲ. "ಹಾವಿನ ಬಾಯ ಹಲ್ಲ ಕಳೆದು ಹಾವನಾಡಿಸಬಲ್ಲರೆ ಹಾವಿನ

ಸಂಗವೇ ಲೇಸು" ಎಂದು ಶರಣರು ಸಾರಿದ್ದಾರೆ. ಪತಿಯಂತೆ ಸತಿಯು ಸನ್ಮಾರ್ಗದಾಯಿಯೂ ಸುಜ್ಞಾನಿಯೂ ಆದರೆ ಸಂಸಾರದಿಂದ ದೈಹಿಕವಾಗಿ ದೂರವಾಗಬೇಕಾಗಿಲ್ಲ. ಪ್ರಕೃತಿ ನಿಯಮಗಳಿಗೆ ವಿರೋಧವಾಗಿ ನಡೆಯಬೇಕೆಂಬುದು ಯಾವ ಯೋಗೀಂದ್ರರ ಕಲ್ಪನೆಯೂ ಅಲ್ಲ. ಸಂಸಾರದ ಅಲ್ಪಸುಖಕ್ಕೆ ದಾಸನಾಗುವುದು ಸಂಸಾರಸುಖವೇ ಗುರಿಯೆಂದು ಭಾವಿಸುವುದು ಯೋಗಮಾರ್ಗಕ್ಕೆ ಆತಂಕಗಳು. ನಿಜಗುಣರ ಮನೋವೃತ್ತಿಯನ್ನು ಅರಿತು ನಡೆಯುವ ಸತಿ ದೊರೆಯಲಿಲ್ಲ. ಆದುದರಿಂದ ಅವರು ಸಂಸಾರತ್ಯಾಗಮಾಡಿದರು. ನಿರಾತಂಕವಾಗಿ ಯೋಗವೃತ್ತಿಯಲ್ಲಿ ಮುನ್ನಡೆದರು. ಸಂಸಾರದಲ್ಲಿದ್ದರೂ ಶಿವಯೋಗಿಯಾಗಬಹುದು ಎಂಬುದನ್ನು ಅವರು ಹಲವಾರು ಕಡೆಗಳಲ್ಲಿ ಹಾಡಿದ್ದಾರೆ. ಅದನ್ನು ಮುಂದೆ ಚರ್ಚಿಸಲಾಗುವುದು. ಆದರೆ ಅವರ ಸಂಸಾರತ್ಯಾಗ ಅನಿರೀಕ್ಷಿತವಾಗಿ ಲಭ್ಯವಾದ ಅವಕಾಶ. ಅದನ್ನು ಸದುಪಯೋಗ ಮಾಡಿಕೊಂಡು ಅದರ ಫಲವನ್ನು ಅವರು ಅನುಭವಿಸಿದರು. ಶಾಸ್ತ್ರಾಭ್ಯಾಸ ಸಾತ್ವಿಕ ಪ್ರವೃತ್ತಿ ಸಾಧನಾ ಮನೋಧರ್ಮ ಅವರಿಗೆ ಜೀವಂತವಾಗಿ ಬಂದ ಪೂರ್ವಜನ್ಮದ ಪುಣ್ಯದೇಣಿಗೆ. ಅವು ಅವಕಾಶ ಸಿಕ್ಕಿದಾಗ ಪಲ್ಲವಿಸಿ ಫಲ ನೀಡಿದುವು. ಈ ಪ್ರವೃತ್ತಿಗಳು ಲಭ್ಯವಾಗಿರುವುದು ಲಕ್ಷಕ್ಕೋ ಕೋಟಿಗೋ ಒಬ್ಬರಿಗಿರಬಹುದು. ಇರುವುದನ್ನು ಬೆಳಸಿ ಉಳಿಸಿಕೊಳ್ಳುವ ಅಭಿಲಾಷೆಯುಳ್ಳವರು ಮಾತ್ರ ವಿರಳ. ಆದುದರಿಂದಲೇ ಉಳಿಸಿಕೊಂಡವರು ಮಾನವತ್ವದಿಂದ ಮೇಲೇರಿ ಮಹಾನುಭಾವರಾಗುತ್ತಾರೆ. ನಿಜಗುಣರು ಅಂತಹ ದಿವ್ಯಾತ್ಮರು. ಕವಿಕುಲದಲ್ಲಿ ಕವೀಶ್ವರರು. ಸಂತರಲ್ಲಿ ಮಹಾಸಂತರು. ಪಂಡಿತಗಣದಲ್ಲಿ ಪಂಡಿತೋತ್ತಮರು. ಯೋಗಸಾಧಕರಲ್ಲಿ ಯೋಗೀಂದ್ರರು.

ಅರಸೊತ್ತಿಗೆಯನ್ನು ತ್ಯಜಿಸಿ ಶಂಭುಲಿಂಗನ ಬೆಟ್ಟಕ್ಕೆ ಬಂದವರು ಜೀವನದಲ್ಲಿ ನಿರಾಶರಾಗಿ ಕುಳಿತುಕೊಳ್ಳಲಿಲ್ಲ. ತತ್ತ್ವಾಭ್ಯಾಸ ಜಿಜ್ಞಾಸೆಗಳನ್ನು ನಡೆಸಿದರು. ಭಕ್ತಿಯನ್ನು ಬೆಳೆಸಿಕೊಂಡರು. ಅಭ್ಯಾಸದಿಂದ ಉದ್ಭವಿಸಿದ ಆನಂದವನ್ನು ಹೃದಯಾಂತರಾಳದಲ್ಲಿ ಪ್ರತಿಧ್ವನಿಸಿದರು. ಕಾವ್ಯವಾಹಿನಿಯಾಗಿ ಹರಿಸಿ ಮಾನವ ಕುಲವನ್ನು ಹರಸಿದರು. ಹೀಗೆ ಹರಿಯುತ್ತಿದ್ದ ಭಕ್ತಿಗೀತಗಳ ಕಾವ್ಯಗಂಗೆ ಅಧ್ಯಾತ್ಮ ಸಂಪತ್ತನ್ನೇ ಹೊತ್ತುತಂದಳು. ಪಂಡಿತ ಪಾಮರರು ಈ ವಾಹಿನಿಯಲ್ಲಿ ಮಿಂದು ಆನಂದಪಟ್ಟರು. ಈ ಆನಂದ ಕೇವಲ ಮಾನಸಿಕವಾಗಿಯೇ ಉಳಿದಿತ್ತು. ಅನುಭವದ ಅಮೃತವಾಗಲಿಲ್ಲ. ದಿವ್ಯದರ್ಶನದ ದೀಪ್ತಿಯಾಗಲಿಲ್ಲ. ಅಲ್ಲಿದ್ದ ಒಬ್ಬೊಬ್ಬರು ಸಾಧಕರು ಅನುಭವವೇತ್ತರಾಗಿದ್ದರೂ ಮತ್ತೊಬ್ಬರನ್ನು ನೋಲಿತ್ತುವ ಸಾಮರ್ಥ್ಯವನ್ನು ಪಡೆದಿರಲಿಲ್ಲ. ಮನದಾನಂದವನ್ನು ಅನುಭವಕ್ಕೆ ಅಳವಡಿಸಿಕೊಡಬಲ್ಲ ಶಿಲ್ಪಿಯನ್ನು ಪಡೆಯಬೇಕೆಂಬ ಬಯಕೆ ಅವರಲ್ಲಿ ಮೂಡಿತು. ಅಂತಹವರನ್ನು ಅಲ್ಲಲ್ಲಿ ಅರಸುತ್ತಾ ನಡೆದರು. ಅಂತಹ ಶಕ್ತಿ ಯಾವಾಗಲೂ ನೆಲದ ಮರೆಯ ನಿಧಾನದಂತೆ ತಿಲದಮರೆಯ ತೈಲದಂತೆ ಅಡಗಿರುತ್ತದೆ. ಪುಣ್ಯಶೀಲರಿಗೆ ನಿಂದಲ್ಲಿ ದೊರೆಯುತ್ತದೆ. ಅವರ ಮನೋನಿಶ್ಚಯಕ್ಕೆ ಯಾರೋ ದಾರಿ ತೋರಿದರು. ನಿಜಗುಣರು ಮುಂದೆ ಪ್ರಯಾಣ ಮಾಡಿದರು.

ಕನ್ನಡನಾಡಿನಲ್ಲಿ ಸ್ವಾದಿಸಂಸ್ಥಾನ ಚರಿತ್ರಾರ್ಹವಾದುದು. ಶಿವಭಕ್ತಿವೈಭವಕ್ಕೆ ಹೆಸರಾದ ನಾಡು. ಅಲ್ಲಿಗೆ ಸೇರಿದ ಬೂದಿಕೇರಿ ಪಟ್ಟಣದಲ್ಲಿ ಒಂದು ಸುಪ್ರಸಿದ್ಧ ಮಠ. ಯೋಗಸಿದ್ಧರಾದ ಶ್ರೀ ಭುಜಲಿಂಗಸ್ವಾಮಿಗಳು ಆ ಮಠದ ಅಧಿಪತಿಗಳು. ಅವರ ಯೋಗನಿಷ್ಠೆ ತಪೋಶಕ್ತಿ ಬಹುಜನರನ್ನು ಆಕರ್ಷಿಸಿದ್ದಿತು.

ಅವರು ವಿಚಾರಮಥನಕ್ಕೆ ಹೆಚ್ಚು ಕಾಲವನ್ನು ವಿನಿಯೋಗಿಸಿದವರಲ್ಲ. ಆಚಾರಶಕ್ತಿಯಲ್ಲಿ ನಂಬಿಕೆಯಿಟ್ಟವರು. ಅವರಿಂದ ಅನುಗ್ರಹ ಪಡೆದು ಜ್ಞಾನಶಕ್ತಿ ಕ್ರಿಯಾಶಕ್ತಿಗಳ ಸಂಗಮ ಗೊಳಿಸಿಕೊಳ್ಳಬೇಕೆಂಬುದು ನಿಜಗುಣರ ಬಯಕೆ. ಅದರಂತೆ ಆ ಮಠಕ್ಕೆ ಬಂದು ಗುರುದರ್ಶನಕ್ಕೆ ಅಪ್ಪಣೆ ಕೇಳಿದರು. ನಿಜಗುಣರಂತಹ ಅದ್ವಿತೀಯ ಶಿಷ್ಯನೊಬ್ಬನಿಗೆ ಅನುಗ್ರಹ ಮಾಡಲೇಬೇಕೆಂದು ಅವರ ಅಂತರ್ವಾಣಿಯು ಅಪ್ಪಣೆಯಾಗಿತ್ತು. ಆದರೆ ರಾಜಭೋಗಗಳಲ್ಲಿ ಮೆರೆದವರಿಗೆ ಯೋಗಮಾರ್ಗದಲ್ಲಿ ನಂಬಿಗೆ ಬರುವುದು ಕಠಿಣ. ಅನರ್ಹನಿಗೆ ಯೋಗಶಿಕ್ಷಣದ ಅನುಗ್ರಹ ಮಾಡುವುದರಿಂದ ಉಪಕಾರಕ್ಕಿಂತಲೂ ಅನರ್ಥಗಳೇ ಹೆಚ್ಚುವ ಸಂಭವವುಂಟು ಶ್ರೀ ಭುಜಲಿಂಗಸ್ವಾಮಿಗಳು ನಿಜಗುಣರನ್ನು ನಿಷ್ಠೆಯ ಪರೀಕ್ಷೆಗೆ ಗುರಿಮಾಡಿದರು. ಅರಸುತನದ ಹಮ್ಮು ಹರಿದು ಆಳಿನಂತೆ ಗುರುಮಠದಲ್ಲಿ ಸೇವೆಮಾಡಿದರು. ಎಂತಹ ಕಠಿಣ ಪ್ರಸಂಗಗಳು ಬಂದರೂ ತನ್ನ ನಿಶ್ಚಲಪ್ರವೃತ್ತಿಯಿಂದ ಹಿಮ್ಮೆಟ್ಟಲಿಲ್ಲ. ಗುರುಗಳಿಗೆ ಆನಂದವಾಯಿತು. ಯೋಗಮಾರ್ಗದಲ್ಲಿ ದರ್ಶನವಿತ್ತರು. ಅನುಗ್ರಹದ ಕೃಪೆಯಾಯಿತು. ನಿರ್ದಿಷ್ಟ ಕಾಲದವರೆಗೆ ಅಲ್ಲಿ ಶಿಕ್ಷಣಪಡೆದು ಅದರ ಫಲವನ್ನು ನಾಡಿಗೆ ನೀಡುವ ಸಲುವಾಗಿ ಶಂಭುಲಿಂಗನ ಬೆಟ್ಟಕ್ಕೆ ಮರಳಿದರು. ಗುರು ಸಮ್ಮುಖದಲ್ಲಿ ಶಿಕ್ಷಣ ಪಡೆಯುವಾಗಲೇ ಹಲವಾರು ಕೃತಿಗಳು ಅವರ ಹೃದಯದಿಂದ ಉಕ್ಕಿ ಮುಮುಕ್ಷುಗಳಿಗೆ ರಸದೌತಣ ಮಾಡಿದುವು. ಅವುಗಳಿಗೆ ಒಂದು ನಿರ್ದಿಷ್ಟರೂಪ ಕೊಡುವುದು ಅಗತ್ಯವಾಗಿತ್ತು. ಆ ಮಹತ್ಕಾರ್ಯಕ್ಕೆ ಗುರುಗಳ ಆಶೀರ್ವಾದ ದೊರೆಯಿತು. ಇದು ಅವರ ಶಿವಯೋಗ ಜೀವನದ ಎರಡನೆಯ ಪರ್ವ.

ಮರಳಿ ಶಂಭುಲಿಂಗನ ಬೆಟ್ಟವನ್ನು ಸೇರಿದ ಮೇಲೆ ಅಲ್ಲಿ ಯೋಗಸಾಧನೆಯಲ್ಲಿ ನಿರತರಾದರು. ತಾವು ಅದರಿಂದ ಕಂಡು ಉಂಡ ಅನುಭವವನ್ನು ಕೃತಿರೂಪದಲ್ಲಿ ಹರಿಸತೊಡಗಿದರು. ಶ್ರೇಯಸ್ಕರವಾದ ಕಾರ್ಯಗಳನ್ನು ಕೈಗೊಂಡವರಿಗೆ ವಿಘ್ನಗಳು ಬಹಳ. ಅದರಲ್ಲಿ ಯೋಗಸಾಧಕರಿಗೆ ಬಹಿರಂಗದ ತೊಡರುಗಳಿಗಿಂತ ಅಂತರಂಗದ ತೊಡರುಗಳೇ ಅಧಿಕ. ಹಲವಾರು ವರ್ಷಗಳು ಭೌತಿಕ ಲೋಲುಪತೆಯಲ್ಲಿ ಬೆಳೆದ ದೇಹ ಸಾಧನೆಯ ಕುಲುಮೆಯಲ್ಲಿ ಹದವಾಗಿ ಪುಟವಿಟ್ಟ ಭಂಗಾರವಾಗಬೇಕಾದರೆ ಎಷ್ಟೋ ರೂಪಾಂತರ ಹೊಂದಬೇಕು. ಯೋಗಸಾಧನೆಯ ಫಲವನ್ನು ಕೇಳದಾಗ ಆನಂದವಾಗುತ್ತದೆ. ಅದನ್ನು ಪಡೆಯಲು ಪ್ರಯತ್ನಿಸಿದಾಗ ಅದೇ ಮನೋಧರ್ಮ ಉಳಿಯುವುದು ಕಷ್ಟ. ಇಂತಹ ಘಟನೆಗಳು ನಿಜಗುಣರ ಜೀವನದಲ್ಲೂ ಬಂದಿರಬಹುದು. ಬುದ್ಧ ಭಗವಾನರು ಸಿದ್ಧಿಯ ಸಾಹಸಕ್ಕೆ ತೊಡಗಿದಾಗ ಅದೆಷ್ಟೋ ಅಂತರಂಗಿಕ ತೊಂದರೆಗಳು ಮುಂದಾದುವು. ಬೌದ್ಧರ ಪುರಾಣ ಗ್ರಂಥಗಳಲ್ಲಿ ಈ ವಿಷಯವನ್ನು ಚಿತ್ರಿಸುವಾಗ ಮಾರನ ಚರಿತ್ರೆಯನ್ನೇ ಸೃಷ್ಟಿಸಿದ್ದಾರೆ. ಬುದ್ಧನೂ ಈ ಅನುಭವವನ್ನು ಒಮ್ಮೊಮ್ಮೆ ಶಿಷ್ಯರ ಮುಂದೆ ತೋಡಿಕೊಂಡಿದ್ದಾನೆ. ರಾಮಕೃಷ್ಣ ಪರಮಹಂಸರು ಶಾರದಾಮಣಿಯವರನ್ನು ಲಗ್ನವಾದರೂ ಆಜನ್ಮ ಬ್ರಹ್ಮಚಾರಿಗಳಾಗಿದ್ದವರು. ಮಡದಿಯನ್ನು ಮಹಾತಾಯಿಯೆಂದು ಪೂಜಿಸಿ ಆದಿಶಕ್ತಿಯ ಸಾಕ್ಷಾತ್ಕಾರಮಾಡಿಕೊಂಡವರು. ಅವರಿಗೆ ಅಂತ್ಯಕಾಲಕ್ಕೆ ಕೆಲವು ದಿನಗಳ ಹಿಂದೆ ಮನಸ್ಸಿನ ಮೇಲೆ ವಾಸನಾಯುತ ಪ್ರಚೋದನೆಯಾಯಿತು. ಬಹುದಿನದಿಂದ ರಕ್ಷಿಸಿಕೊಂಡು ಬಂದ ನಿಷ್ಠೆ ಅವರನ್ನೇ ಅಲ್ಲಾಡಿಸತೊಡಗಿತು. ಆಗ ಗಂಗಾತೀರದಲ್ಲಿ ದಿನವೆಲ್ಲಾ ಹೊರಳಾಡಿದರು. ತನಗಾದ ಅವಸ್ಥೆಗೆ

ಕಣ್ಣೀರಿಟ್ಟು ತನಗೆ ರಕ್ಷಣೆಕೊಡಬೇಕೆಂದು ದೇವಿಯನ್ನು ಬೇಡಿದರು. ದೇವಿಯು ಕರುಣೆಯಿಂದ ವಾಸನಾ ಮಾಯೆಯನ್ನು ಜಯಿಸಿದರು. ತಮ್ಮ ನಿಷ್ಠೆ ಸತ್ಫಲವನ್ನೇ ಅವರಿಗೆ ನೀಡಿತು. ಅಂತೆಯೇ ನಿಜಗುಣರು ಯೋಗಸಾಧನೆಯಲ್ಲಿ ತೊಡಗಿದಾಗ ಮಾನಸಿಕ ವಿಕೃತಿ ಅವರನ್ನು ತಲ್ಲಣಗೊಳಿಸಿತು. ಗುರುವಿನ ಅನುಗ್ರಹ ಆಜನ್ಮ ಸಂಸ್ಕಾರ ಅವರನ್ನು ಸಂರಕ್ಷಿಸಿದುವು. ಎಲ್ಲ ವಾಸನೆಗಳನ್ನು ಜಯಿಸಿ ಶಿವಯೋಗಿಯೆನಿಸಿದರು. ನಮ್ಮ ಪೂರ್ವಜರು ಈ ಚಿತ್ರವನ್ನು ನಿರೂಪಿಸಿದ ಬಗೆ ಒಂದು ವಿಚಿತ್ರ ಆದರೂ ವಿಶಿಷ್ಟ.

ಅವರು ಶಂಭುಲಿಂಗನ ಬೆಟ್ಟದಲ್ಲಿ ಅಭ್ಯಾಸದಲ್ಲಿ ತೊಡಗಿದಾಗ ಅಲ್ಲಿ ಮಾಯಾ ರಕ್ಕಸಿಯೊಬ್ಬಳಿದ್ದಳು. ಅವಳು ಅವರನ್ನು ಪೀಡಿಸತೊಡಗಿದಳು. ಅದಕ್ಕೆ ಅವರು ತಮ್ಮ ಶಿವಾರ್ಚನೆಯಾಗುವವರೆಗೂ ತಮ್ಮ ಹಸ್ತದಲ್ಲಿರುವ ಚಿತ್ತದಲ್ಲಿ ಪ್ರವೇಶಿಸಿ ಅದರ ಗೆಜ್ಜೆಯ ಶಬ್ದ ಮಾಡುತ್ತಿರಬೇಕೆಂದು ಆಜ್ಞಾಪಿಸಿದರು. ಶಿವಾರ್ಚನೆ ಮುಗಿದನಂತರ ತಮಗೆ ಕಾಡಬಹುದೆಂದು ಅನುಮತಿ ಇತ್ತರು. ಅದರಂತೆ ಮಾಯರಕ್ಕಸಿ ಹನ್ನೆರಡು ವರ್ಷಗಳ ಕಾಲ ಅವರನ್ನು ಪೀಡಿಸಿದಳು. ಕೊನೆಗೆ ತಾನೇ ತನ್ನ ಸೋಲನ್ನು ಒಪ್ಪಿಕೊಂಡು ನಿಜಗುಣರ ಕ್ಷಮೆ ಕೇಳಿದಳು. ತನ್ನ ಅವಿವೇಕಕ್ಕೆ ಪರಿತಾಪಪಟ್ಟಳು. ನಿಜಗುಣರು ಕೃಪೆ ಮಾಡಿದರು. ತಮ್ಮ ಸಾಧನಾಕ್ಷೇತ್ರದ ಗವಿಯ ಬಳಿಯಲ್ಲಿಯೇ ತಾನೂ ಇದ್ದು ಜನರಿಂದ ಪೂಜಿಸಿಕೊಳ್ಳಲು ಅನುಮತಿ ಇತ್ತರು. ಅವರಿಂದಲೇ ಈಗಲೂ ಶಂಭುಲಿಂಗನ ಬೆಟ್ಟದ ತಪ್ಪಲಿನಲ್ಲಿ ಶಂಭುಲಿಂಗ ಮಂದಿರದ ಬಲಭಾಗದಲ್ಲಿ ದುರ್ಗಿ ಮಂಟಪವೊಂದಿದೆ. ಅಲ್ಲಿ ಈಗಲೂ ಪ್ರತಿವರ್ಷವೂ ಉತ್ಸವಾದಿಗಳು ನಡೆಯುತ್ತವೆ. ಸಹಸ್ರಾರು ಭಕ್ತರು ಬಂದು ತಮ್ಮ ಸೇವೆಯನ್ನು ಅಲ್ಲಿಗೆ ಸಲ್ಲಿಸು

ತ್ತಾರೆ. ಅಲ್ಲಿ ದುರ್ಗಿ ಮಂಟಪವಿರುವುದಕ್ಕೂ, ಅದನ್ನು ಜನರು ಪೂಜಿಸುತ್ತಿರುವುದಕ್ಕೂ, ಯಾವ ಚಾರಿತ್ರಿಕ ಹಿನ್ನೆಲೆಯೂ ದೊರೆತಿಲ್ಲ. ಕಥಾವಸ್ತುವು ಸತ್ಯವೋ ಊಹಾಪೋಹವೋ ಹೇಳಲಾಗುವುದಿಲ್ಲ. ಆದರೆ ಅದಕ್ಕಿರುವ ತಾತ್ವಿಕ ಹಿನ್ನೆಲೆ ಮಾತ್ರ ಮಾನ್ಯವಾದುದು.

ಕನ್ನಡನಾಡಿನ ಪ್ರತಿಯೊಂದು ಕಲ್ಲಿಗೂ ಒಂದೊಂದು ಕಥೆಯೂ ಇತಿಹಾಸವೂ ಇದೆ ಎಂದು ಬಲ್ಲವರು ಹೇಳುತ್ತಾರೆ. ಈ ನಾಡಿನ ಎಷ್ಟೋ ಕಡೆಗಳಲ್ಲಿ ಶ್ರೀರಾಮನ ಪಾದ, ಸೀತೆಯ ಸೆರಗು, ಭೀಮನ ಹೆಜ್ಜೆ, ಹನುಮನಮಂಡಿ, ಪಾಂಡವರಗುಡ್ಡ ಮುಂತಾಗಿ ಎಷ್ಟೋ ಕಥೆಗಳನ್ನು ಕೇಳಿದ್ದೇವೆ. ನಿಜವಾಗಿ ಶ್ರೀರಾಮಚಂದ್ರ ಅಲ್ಲಿ ಹೆಜ್ಜೆ ಇಟ್ಟನೋ ಇಲ್ಲವೋ ಹೇಳಲಾಗುವುದಿಲ್ಲ. ಸೀತೆಯ ಸೆರಗು ಬಂಡೆಯ ಮೇಲೆ ಎಳೆದಾಗ ಕಲ್ಲಿನಲ್ಲಿ ಕೆತ್ತಿದಂತಹ ಚಿತ್ರವಾಗಿರುವುದನ್ನು ನಂಬಲು ದುಸ್ಸಾಧ್ಯವಾಗಬಹುದು. ಆದರೆ ಈ ಕಥೆಯ ಹಿನ್ನೆಲೆ ಮಾತ್ರ ಆದರ್ಶಪ್ರಾಯವಾದುದು. ಯಾರೋ ಒಬ್ಬ ಶ್ರೀರಾಮಚರಿತ್ರೆಯಲ್ಲಿ ಆಸಕ್ತನಾದ ವ್ಯಕ್ತಿ ತನ್ನ ಭಕ್ತಿಯನ್ನು ಅರ್ಪಿಸಲು ತಾನು ಕುಳಿತ ಕಡೆ ಕಲ್ಲಿನಲ್ಲಿ ಶ್ರೀರಾಮನ ಪಾದದಂತೆ ಪಾದದ ಚಿತ್ರವನ್ನು ಕೆತ್ತಿರಬಹುದು. ಅದನ್ನೇ ನಂಬಿ ಶ್ರೀರಾಮನನ್ನು ಸ್ಮರಿಸಿರಬಹುದು. ತನ್ನ ಬಳಿಗೆ ಬಂದವರಿಗೆ ಶ್ರೀರಾಮನ ಆದರ್ಶ ಕಥೆಯನ್ನು ಅವರಿಗೆ ಬೋಧಿಸಿರಬಹುದು. ಆದುದರಿಂದ ಅದು ಶ್ರೀರಾಮನ ಪಾದವೆಂಬ ಪ್ರತೀತಿ ಬಂದಿರಬಹುದು. ಅದೇನೇ ಇರಲಿ. ಅಲ್ಲಿಗೆ ಬಂದವರ ಮನಸ್ಸಿಗೆ ಶ್ರೀರಾಮಚರಿತ್ರೆಯ ಸ್ಮರಣೆಯಾಗುತ್ತದೆ. ಅಂತೆಯೇ ಸೀತೆಯ ಸೆರಗು, ಭೀಮನ ಹೆಜ್ಜೆಗಳಿಗೂ ಕಲ್ಪನೆಗಳಿರಬಹುದು. ಈ ಕಲ್ಪನೆಗಳಿಂದ ನಮಗೆ ನಷ್ಟವೇನಿಲ್ಲ. ಈ ವಿಚಿತ್ರ

ಗಳನ್ನು ಸ್ಮರಿಸಿದಾಗ ನಮ್ಮ ನಾಡಿನ ಜನರ ಕುಶಲತೆ ಮೆಚ್ಚ ತಕ್ಕದ್ದು. "ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್" ಎನ್ನುವ ನೃಪತುಂಗನ ಮಾತಿಗೆ ಇವು ಜೀವಂತ ಸಾಕ್ಷಿಯಾಗಿವೆ. ಅಂತೆಯೇ ಶಂಭುಲಿಂಗನ ಬೆಟ್ಟದ ತಪ್ಪಲಿನಲ್ಲಿರುವ ದುರ್ಗೀ ಮಂಟಪಕ್ಕೂ ತಾತ್ವಿಕ ದೃಷ್ಟಿಯಿಂದ ಸೃಷ್ಟಿಯಾದ ಐತಿಹ್ಯವಿರಬಹುದು. ಒಟ್ಟಿನಲ್ಲಿ ನಿಜಗುಣಶಿವಯೋಗಿಗಳು ಮಾಯೆಯನ್ನು ಗೆದ್ದವರೆಂಬುದಕ್ಕೆ ಸಾಕ್ಷಿಯಾದಂತಿದೆ ಈ ಕಥೆ. ಅವರು ಗೆದ್ದ ಮಾಯೆ ಅದ್ವೈತಿಗಳ ಕಲ್ಪನೆಯ ಮಾಯೆ ಅಥವಾ ಅನಾದಿ ಅವಿದ್ಯೆಯಲ್ಲ. ಶರಣರ ಕಲ್ಪನೆಯ ಮಾಯೆಯ ವಿಷಯವಾಗಿ ಪ್ರಸ್ತಾಪಿಸಿ:

"ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ. ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ. ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ. ಮನದ ಮುಂದಣ ಆಶೆಯೇ ಮಾಯೆಕಣಾ" ಎಂದಿದ್ದಾರೆ. ನಿಜಗುಣರು ಸಾಮಾನ್ಯ ಮಾನವನ ಮಾನಸಿಕ ಪ್ರವೃತ್ತಿಯನ್ನು ಮೀರಿ ಯೋಗಸಿದ್ಧಿಯನ್ನು ಪಡೆದವರಾಗಿದ್ದರೆಂಬುದಕ್ಕೆ ಅವರ ಕೃತಿಗಳು ಸಹಜ ಸಾಕ್ಷಿಗಳಾಗಿವೆ.

ಮಾಯೆಯನ್ನು ಜಯಿಸಿ ನಿರಂಜನಸ್ವರೂಪರಾದ ನಿಜಗುಣರು ತಮ್ಮ ಸಾಧನೆಯ ಪೂರ್ಣ ಫಲವನ್ನು ಸಿದ್ಧಿಸಿಕೊಂಡರು. ಯೋಗಾಭ್ಯಾಸ ಶಾಸ್ತ್ರಾಭ್ಯಾಸಗಳು ನಿರಾತಂಕವಾಗಿ ನಿರಂತರ ನಡೆದುವು. ಭಾರತೀಯ ದರ್ಶನ ಶಾಸ್ತ್ರವನ್ನು ಕರತಲಾಮಲಕವಾಗಿ ಮಾಡಿಕೊಂಡರು. ಅರಿವು ಅನುಭವದಲ್ಲಿ ಕೂಡಿ ದಿವ್ಯಾತ್ಮರಾದರು. ಈ ಸಮಯದಲ್ಲಿ 'ಪರಮಾರ್ಥಪ್ರಕಾಶಿಕೆ, ಪರಮಾನುಭವ ಬೋಧೆ, ಕೈವಲ್ಯಪದ್ಧತಿ ಮುಂತಾದ ಅನೇಕ ಕೃತಿಗಳ ರಚನೆಯಾಯಿತು. ಅವರ ಕೃತಿಗಳು ಜನಜನಿತವಾಗಿ ಪಂಡಿತ

ಪಾಮರರೆಲ್ಲರನ್ನೂ ತಣಿಸಿದುವು. ಇದೇ ಸಮಯದಲ್ಲಿ ಮತ್ತೊಬ್ಬ ಯೋಗೀಶ್ವರರಾದ ಇದೇ ಸಮೀಪದ ಕ್ಷೇತ್ರಕ್ಕೆ ಸೇರಿದ ಯಳಂದೂರು ತಾಲ್ಲೂಕಿನ ಯರಗಂಬಳ್ಳಿ ಮಠಾಧ್ಯಕ್ಷರಾದ ಮುಪ್ಪಿನ ಷಡಕ್ಷರಿಗಳ ಪರಿಚಯವಾಯಿತು. ಆತ್ಮಾನುಭವಿಗಳಿಬ್ಬರ ಸಮಾಗಮವನ್ನು ಕಂಡು ಭಕ್ತಜನ ಸಂತುಷ್ಟರಾದರು. ಈರ್ವರು ಮಹಾಪುರುಷರ ವಿಚಾರ ವಿಮರ್ಶೆಯಲ್ಲಿ ಪಾಲ್ಗೊಂಡು ಜನ ಪುನೀತರಾದರು. ಅವರ ನೇತೃತ್ವದಲ್ಲಿ ನಿತ್ಯವೂ ನಡೆಯುತ್ತಿದ್ದ ಶಿವಾನುಭವ ಗೋಷ್ಠಿ ನೂರಾರು ಜನರ ಜ್ಞಾನಪ್ರಾಪ್ತಿಗೆ ಕಾರಣವಾಯಿತು. ಇತ್ತ ಇವರೀರ್ವರಿಗೂ ಶಿಕ್ಷಕಗುರುವಾಗಿದ್ದ ಭುಜಲಿಂಗಸ್ವಾಮಿಗಳು ಶಿಷ್ಯರನ್ನು ನೋಡಬೇಕೆಂದು ಬಯಸಿದರು. ಅವರ ಸಾಧನೆಯ ಪೂರ್ಣತೆಯನ್ನು ಕಣ್ಣಾರ ಕಾಣಬೇಕೆಂದು ಅಪೇಕ್ಷಿಸಿದರು. ಗುರುವಿನ ಅಪ್ಪಣೆಯಂತೆ ಈರ್ವರು ಶಿವಯೋಗಿಗಳೂ ಗುರುಸಂದರ್ಶನಕ್ಕಾಗಿ ಪ್ರಯಾಣವನ್ನು ಕೈಗೊಂಡರು.

ಹಿಂದಿನಕಾಲದಲ್ಲಿ ದೂರದೇಶದ ಪ್ರಯಾಣಕ್ಕೆ ವಾಹನ ಸೌಕರ್ಯಗಳಿರಲಿಲ್ಲ. ಪಾದಯಾತ್ರೆಯಲ್ಲೇ ಹೊರಡಬೇಕಾಗಿತ್ತು. ಇಬ್ಬರೂ ಒಂದು ನಿಶ್ಚಿತವಾದ ದಿನ ಶಂಭುಲಿಂಗನ ಬೆಟ್ಟವನ್ನು ಬಿಟ್ಟು ಬಹುದೂರ ನಡೆದರು. ಮುಪ್ಪಿನ ಷಡಕ್ಷರಿಗಳಿಗೆ ಪೂಜಾ ಸಾಮಗ್ರಿಗಳ ಪೆಟ್ಟಿಗೆಯೇ ಹೊರೆ. ನಿಜಗುಣ ಶಿವಯೋಗಿಗಳಿಗೆ ತಮ್ಮ ಕೃತಿಗಳೇ ಸಿರಿ. ಹೀಗೆ ಬಹುದೂರ ನಡೆದು ಕತ್ತಲಾಗುವ ವೇಳೆಗೆ ಒಂದು ಗ್ರಾಮವನ್ನು ಸೇರಿದರು: ಅಲ್ಲಿ ಮಠಗಳಿಲ್ಲ, ಶಿವಾಲಯಗಳಿಲ್ಲ. ಅಲ್ಲಿಯೇ ಅಂದು ಬಿಡಾರ ಮಾಡಬೇಕು. ಅಲ್ಲಿರುವುದು ದ್ಯಾಮವ್ವನೆಂಬ ದುರ್ಗಿಯ ಗುಡಿ ಮಾತ್ರ. ಮುಪ್ಪಿನ ಷಡಕ್ಷರಿಗಳು ಶೀಲವಂತರು. ಅವರ ಪೆಟ್ಟಿಗೆ

ಯನ್ನು ದುರ್ಗಿ ದೇವಾಲಯದಲ್ಲಿಟ್ಟರೆ ಅವರ ಶೀಲಕ್ಕೆ ಭಂಗ ಬರುತ್ತದೆ. ಆದುದರಿಂದ ಅವರು ಇಡೀ ರಾತ್ರಿಯೆಲ್ಲಾ ತಮ್ಮ ಪೆಟ್ಟಿಗೆಯನ್ನು ತಲೆಯ ಮೇಲೆ ಹೊತ್ತು ಕುಳಿತೇ ಕಾಲಕಳೆದರು. ನಿಜಗುಣರು ತಮ್ಮ ಗ್ರಂಥಗಳ ಗಂಟನ್ನು ಪಕ್ಕದಲ್ಲಿಟ್ಟುಕೊಂಡು ಹಾಯಾಗಿ ಮಲಗಿದರು. ಪ್ರಯಾಣದ ಆಯಾಸ ಅವರ ಮನಸ್ಸಿಗಿಲ್ಲದಿದ್ದರೂ ದೇಹಕ್ಕೆ ಆಗಿದ್ದಂತೆ ತೋರಿರಬಹುದು. ಆಗ ಅವರು ದ್ಯಾಮವ್ವನ ಮೂರ್ತಿಗೆ ತನ್ನ ಕಾಲುಗಳಿಗೆ ಆಸರೆಯಾಗಿ ಆಯಾಸ ಪರಿಹರಿಸುವಂತೆ ಆಜ್ಞಾಪಿಸಿದರು. ಆ ಮೂರ್ತಿ ತಾನಾಗಿಯೇ ಬಂದು ಅವರ ಕಾಲುಗಳಿಗೆ ಆಸರೆಯಾಯಿತು. ಬೆಳಗಾದ ಕೂಡಲೇ ಯಥಾಪ್ರಕಾರ ತನ್ನ ಸ್ಥಾನಕ್ಕೆ ತೆರಳುವಂತೆ ತಿಳಿಸಿದರು. ಅದರಂತೆ ನಡೆಯಿತು. ಇದುವರೆಗೆ ಮುಪ್ಪಿನ ಷಡಕ್ಷರಿಗಳು ಶಿವಯೋಗಿಯೂ ಶಿವಜ್ಞಾನಿಯೂ ಆದ ನಿಜಗುಣರನ್ನು ನೋಡಿದ್ದರೇ ಹೊರತು ಅವರಲ್ಲಿ ಈ ಜಾಲವಿದ್ಯೆಯಿದೆಯೆಂದು ತಿಳಿದಿರಲಿಲ್ಲ. ಆಗ ಅವರ ಶಿವಯೋಗ ಸಿದ್ಧಿಯ ವಿಷಯದಲ್ಲಿ ಮುಪ್ಪಿನ ಷಡಕ್ಷರಿಗಳಿಗೆ ಸಂಶಯವೇ ಮೂಡಿತು. ಈ ವಿಷಯದಲ್ಲಿ ಅವರೊಡನೆ ಚರ್ಚೆಮಾಡುವ ಸಾಹಸ ಷಡಕ್ಷರಿಗಾಗಲಿಲ್ಲ. ಮೌನವಾಗಿ ಮಾರನೆಯ ದಿನ ಮುನ್ನಡೆದರು.

ಹಿಂದಿನ ರಾತ್ರಿಯೆಲ್ಲಾ ಆಹಾರವಿಲ್ಲ. ಬಹುದೂರ ನಡೆದ ಮೇಲೆ ಒಂದು ಸಣ್ಣ ಗ್ರಾಮದ ಬಳಿಗೆ ಬಂದರು. ಷಡಕ್ಷರಿಗಳಿಗೆ ಶಿವಾರ್ಚನೆಗೆ ಉತ್ತಮ ಅವಕಾಶ ಸಿಕ್ಕಲಿಲ್ಲವೆಂಬ ಕಳವಳ ಮನಸ್ಸಿನಲ್ಲಿ ಮೂಡಿತು. ನಿಜಗುಣರಿಗೆ ಷಡಕ್ಷರಿಗಳ ಮನೋಗತ ಅರ್ಥವಾಯಿತು. ಆ ಸಣ್ಣ ಗ್ರಾಮದಲ್ಲಿ ಶಿವಾರ್ಚನೆಗೆ ಅವಕಾಶವಿರಲಿಲ್ಲವೆಂಬುದು ತಿಳಿಯಿತು. ನಿಜಗುಣರು ಕಮ್ಮಾರನ ಕುಲುಮೆಯ ಬಳಿಗೆ ಬಂದು ಭಿಕ್ಷೆ ಕೇಳಿದರು. ಕುಲುಮೆಯಲ್ಲಿ

ಭಿಕ್ಷೆ ಬೇಡಿದ ವ್ಯಕ್ತಿಯನ್ನು ಕಂಡು ಅಲ್ಲಿದ್ದವರು ಅಪಹಾಸ್ಯ ಮಾಡಿದರು. ಕುಲುಮೆಯಲ್ಲಿ ಸಿಕ್ಕುವುದು ಕಾದ ಕಬ್ಬಿಣದ ರಸ, ಬೇಕಾದರೆ ಅದನ್ನೇ ಕೊಡುತ್ತೇವೆಂದು ವ್ಯಂಗ್ಯವಾಗಿ ನುಡಿದರು. ನಿಜಗುಣರು ಅಂಗೈಯೊಡ್ಡಿ ಕಬ್ಬಿಣದ ರಸವನ್ನೇ ಬೇಡಿದರು. ಚೇಷ್ಟೆ ಮಾಡುವ ಕಮ್ಮಾರರು ಅಂಗೈ ಮೇಲೆ ಕಾದ ಕಬ್ಬಿಣದ ರಸವನ್ನು ಸುರಿದರು. ನಿಜಗುಣರು ನಗುತ್ತಲೇ ಅದನ್ನು ಪಾನ ಮಾಡಿದರು. ಅಲ್ಲಿದ್ದವರಿಗೆ ಆಶ್ಚರ್ಯವೂ ಭಯವೂ ಉಂಟಾಯಿತು. ಅವರಲ್ಲಿ ಕ್ಷಮೆ ಬೇಡಿದರು. ನಿಜಗುಣರು ಅವರನ್ನು ನೋಡಿ ಪಶ್ಚಾತ್ತಾಪಪಟ್ಟು ಮುಂದೆ ನಡೆದರು. ನಂತರ ಮುಂದಿನ ಗ್ರಾಮಕ್ಕೆ ತೆರಳಿ ಶಿವಾರ್ಚನೆ ಪ್ರಸಾದ ಸ್ವೀಕಾರಗಳನ್ನು ಮುಗಿಸಿ ಯಾತ್ರೆಯನ್ನು ಮುಂದುವರಿಸಿದರು. ಮುಂದೆ ನಡೆದು ಹೋಗುತ್ತಿರುವಾಗ ದಾರಿ ತಪ್ಪಿ ಒಂದು ಗೊಂಡಾರಣ್ಯಕ್ಕೆ ಬಂದರು. ಅಲ್ಲಿಗೆ ಕತ್ತಲಾಗಿ ದಾರಿಯೇ ಕಾಣುವಂತಿಲ್ಲ. ಅರಣ್ಯದಲ್ಲಿ ಕ್ರೂರ ಮೃಗಗಳ ಕಾದಾಟ ಗರ್ಜನೆಗಳು ಷಡಕ್ಷರಿಗಳಿಗೆ ಭಯವನ್ನುಂಟು ಮಾಡಿತು. ಈ ರಾತ್ರಿ ಅರಣ್ಯದಲ್ಲೇ ಕಳೆಯಬೇಕೆಂಬುದು ವಿಧಿ ಸಂಕಲ್ಪವಾಗಿತ್ತು. ಅಲ್ಲಿ ಬಿಡಾರಕ್ಕೆ ಎಡೆಯಿಲ್ಲ. ನಿಜಗುಣರು ಷಡಕ್ಷರಿಗಳನ್ನು ಒಂದು ಗುಹೆಯ ಬಳಿಗೆ ಕರೆದೊಯ್ದರು. ಅದು ಮೃಗರಾಜನಾದ ಹುಲಿಯ ಆವಾಸಸ್ಥಾನ. ಗುಹೆಯ ಬಳಿಗೆ ಬಂದೊಡನೆಯೇ ಹುಲಿರಾಯ ಗರ್ಜಿಸುತ್ತಾ ಮೇಲೇರಿ ಬಂದನು. ತಮ್ಮ ಕಥೆಯೇ ಇಲ್ಲಿಗೆ ಮುಗಿಯಿತೆಂದು ಷಡಕ್ಷರಿಗಳು ತಿಳಿದರು. ಹುಲಿಯು ಹೊರಕ್ಕೆ ಬಂದಕೂಡಲೇ ನಿಜಗುಣರು ಹುಲಿಗೆ ಅಪ್ಪಣೆಮಾಡಿ ತನ್ನ ಗುಹೆಯಲ್ಲಿ ತಮಗೆ ಈ ರಾತ್ರಿ ಬಿಡಾರ ಮಾಡಲು ಅವಕಾಶ ಕೊಡಬೇಕೆಂದೂ ತಮಗೆ ತೊಂದರೆಯಾಗದಂತೆ ಬೆಳಗಾಗುವವರೆಗೆ ಕಾವಲಿರಬೇಕೆಂದೂ ತಿಳಿಸಿದರು.

ಹುಲಿಯು ಅವರ ಅಪ್ಪಣೆಯನ್ನು ಯಥಾವತ್ತಾಗಿ ಪರಿಪಾಲಿಸಿತು. ನಿಜಗುಣರ ಈ ಚರ್ಯೆ ಷಡಕ್ಷರಿಗಳಿಗೆ ಆಶ್ಚರ್ಯ ಮತ್ತು ಸಂಶಯಗಳನ್ನು ಹೆಚ್ಚಿಸಿದುವು. ಆದರೂ ವಿಮರ್ಶೆಮಾಡಿ ಅವರೊಡನೆ ಚರ್ಚಿಸುವ ಸಾಹಸವಾಗಲಿಲ್ಲ. ರಾತ್ರಿಯೆಲ್ಲಾ ಅಲ್ಲಿಯೇ ಕಳೆದು ಮರುದಿನ ಪ್ರಯಾಣವನ್ನು ಮುಂದುವರಿಸಿದರು.

ಮಧ್ಯಾಹ್ನದವರೆಗೆ ದಾರಿನಡೆದು ಬಂದರು. ಪಕ್ಕದಲ್ಲಿ ತೆಂಗಿನ ತೋಟ ಕಾಣಿಸಿತು. ಅಲ್ಲಿಗೆ ಹೋಗಿ ನಿಜಗುಣರು ತೋಟದ ಮಾಲೀಕನನ್ನು ತೆಂಗಿನಕಾಯಿಗಳನ್ನು ಕೊಡುವಂತೆ ಕೇಳಿದರು. ತೋಟಗಾರನು ಕಾಯಿಕೊಡಲು ನಿರಾಕರಿಸಿದನು. ಹಾಗಾದರೆ ನಿಮ್ಮ ಕಾಯಿಗಳಲ್ಲಿ ಯಾವ ಫಲವೂ ನಿನಗೆ ಸಿಕ್ಕದೆಂದರು. ತೋಟಗಾರನು ಅವರನ್ನು ಅಪಹಾಸ್ಯ ಮಾಡಿ ಒಂದೆರಡು ಕಾಯಿಗಳನ್ನು ಒಡೆದು ನೋಡಿದನು. ಒಳಗೆ ತಿರುಳಾಗಲೀ ನೀರಾಗಲೀ ಇರಲಿಲ್ಲ. ಅವನು ಭಯಚಕಿತನಾಗಿ ಕ್ಷಮೆ ಬೇಡಿದನು. ಅವರು ಬೇಕಾದಷ್ಟು ಕಾಯಿಗಳನ್ನು ತೆಗೆದುಕೊಳ್ಳುವಂತೆ ಪ್ರಾರ್ಥಿಸಿಕೊಂಡನು. ಅವನು ಭಕ್ತಿಯಿಂದ ಕೊಟ್ಟ ಎರಡು ಕಾಯಿಗಳನ್ನು ಮಾತ್ರ ಸ್ವೀಕರಿಸಿ ಅವನಿಗೆ ಕ್ಷಮೆನೀಡಿ ಮುಂದುವರಿದರು. ಹೀಗೆ ಪ್ರಯಾಣವನ್ನು ಮುಂದುವರಿಸಿ ಸಂಜೆಯಾಗುವುದರಲ್ಲಿ ಗುರುಪೀಠವನ್ನು ಸೇರಿದರು. ದೃಷ್ಟಿಯೋಗನಿಷ್ಠರಾದ ಶ್ರೀ ಭುಜಲಿಂಗ ಸ್ವಾಮಿಗಳಿಗೆ ಇವರ ಆಗಮನದ ಅರಿವಾಗಿತ್ತು. ಶಿಷ್ಯರನ್ನು ನೋಡುವೆನೆಂಬ ಅಭಿಮಾನ ಆನಂದವನ್ನುಂಟುಮಾಡಿತ್ತು. ಈ ಶಿಷ್ಯರು ಗುರುಗಳ ಬಳಿಗೆ ಬಂದು ತಮ್ಮಲ್ಲಿದ್ದ ತೆಂಗಿನಕಾಯಿಗಳನ್ನು ಗುರುಗಳಿಗೆ ಅರ್ಪಿಸಿದರು. ಗುರುಗಳು ಅವರ ಕುಶಲ ಪ್ರಶ್ನೆಗಳನ್ನು ಕೇಳುತ್ತಿದ್ದರು. ಕಾಯಿಗಳನ್ನು ಆಶೀರ್ವದಿಸಿ ಅವರಿಗೇ ಕೊಟ್ಟರು. ಮಾತನಾಡುತ್ತಿರುವಾಗಲೇ ನಿಜಗುಣರು

ಗುರುಗಳಿತ್ತ ತೆಂಗಿನಕಾಯನ್ನು ಮೂಸಿನೋಡಿ ಹೊರಗೆ ಎಸೆದರು. ಮುಪ್ಪಿನ ಷಡಕ್ಷರಿಗಳು ಸ್ನಾನಪೂಜಾದಿಗಳನ್ನು ಮುಗಿಸಿ ಗುರುವಿನ ಆಶೀರ್ವಾದ ರೂಪವಾಗಿ ಬಂದ ಫಲವನ್ನು ಪ್ರಸಾದವಾಗಿ ಉಪಯೋಗಿಸಿದರು. ಮತ್ತೆ ಗುರುಸನ್ನಿಧಿಯಲ್ಲಿ ವಿಚಾರವಿನಿಮಯಕ್ಕೆ ಕುಳಿತರು. ಆಗ ಮುಪ್ಪಿನ ಷಡಕ್ಷರಿಗಳು ನಿಜಗುಣರ ಶಿವಯೋಗಸಿದ್ಧಿಯ ವಿಷಯದಲ್ಲಿ ತಮಗಾದ ಸಂಶಯವನ್ನು ದಾರಿಯಲ್ಲಿ ಅವರು ತೋರಿದ ಚಮತ್ಕೃತಿಯನ್ನು ವಿವರಿಸಿದರು. ಮೇಲಾಗಿ ಗುರುಗಳು ಕೊಟ್ಟ ಆಶೀರ್ವಾದದ ಫಲವನ್ನು ತಾತ್ಸಾರ ಮನೋಭಾವನೆಯಿಂದ ಎಸೆದುದಕ್ಕಾಗಿ ಆಕ್ಷೇಪಣೆಯನ್ನೆತ್ತಿದರು. ಗುರುಗಳು ನಸುನಗುತ್ತ ನಿಜಗುಣರನ್ನು ತಾವು ಎಸೆದ ಫಲದ ವಿಷಯವನ್ನು ಪ್ರಶ್ನಿಸಿದರು. ನಿಜಗುಣರು ತಾವು ಭಕ್ತಿಯಿಂದ ಪ್ರಸಾದಸ್ವೀಕಾರ ಮಾಡಿರುವುದಾಗಿ ಅರಿಕೆ ಮಾಡಿಕೊಂಡರು. ಪರೀಕ್ಷೆಯೇ ನಡೆಯಿತು. ನಿಜಗುಣರು ಎಸೆದಿದ್ದ ಕಾಯನ್ನು ಒಡೆದು ನೋಡಿದಾಗ ಫಲದ ಅಂಶವೇ ಅದರಲ್ಲಿ ಇರಲಿಲ್ಲ. ಷಡಕ್ಷರಿಗಳು ಉಪಯೋಗಿಸಿದ್ದ ತೆಂಗಿನ ಕಾಯಿನಲ್ಲಿ ಅಲ್ಲಲ್ಲಿ ಸ್ವಲ್ಪಭಾಗ ಫಲದ ಅಂಶ ಉಳಿದಿರುವುದು ಕಂಡುಬಂದಿತು. ಷಡಕ್ಷರಿಗಳು ವಾದಮಾಡದೆ ಮೂಕರಂತಾದರು. ಸಾಹಸಮಾಡಿ ನಿಜಗುಣರ ಈ ವರ್ತನೆ ಇಂದ್ರಜಾಲವಿದ್ಯೆಯೆಂದೂ ಶಿವಯೋಗಸಾಧನೆಯ ಅವಹೇಳನವೆಂದೂ ಸೂಚಿಸಿದರು. ನಿಜಗುಣರು ನಮ್ರರಾಗಿ ಉತ್ತರಿಸುತ್ತಾ ಈ ವರ್ತನೆಗಳು ಯೋಗಸಾಧನೆಯಿಂದ ಕೈಗೂಡುವ ಭೌತಿಕ ಫಲಗಳು. ಅರಿಯದವರು ಈ ಶಕ್ತಿಯನ್ನು ದುರುಪಯೋಗ ಮಾಡಿಕೊಂಡು ಲೋಕಕಂಟಕರಾಗುತ್ತಾರೆ. ಆದರೆ ಅದರ ಪ್ರಯೋಗದಿಂದ ಲೋಕವನ್ನು ಉದ್ಧರಿಸಬಹುದು. ನಮ್ಮ ಸ್ವಾರ್ಥಕ್ಕಾಗಿ ಅದನ್ನು ಬಳಸಿ

ಕೊಂಡಾಗ ಅದು ಅಪರಾಧವಾಗುತ್ತದೆ. ಕೇವಲ ಜ್ಞಾನಬೋಧೆಯಿಂದ ಕೆಲವರನ್ನು ಉದ್ಧರಿಸಬಹುದು. ಆದರೆ ಕೆಲವರಿಗೆ ಬೋಧೆಯಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಅವರವರ ಸಂಸ್ಕಾರದ ಮೇಲೆ ಅವರ ಉದ್ಧಾರ ಅವಲಂಬಿಸುತ್ತದೆ. ಆದುದರಿಂದ ಯೋಗಸಾಧನೆಯಿಂದ ಲೌಕಿಕ ಫಲವನ್ನು ಪಡೆಯಬಹುದು ಎಂಬುದನ್ನು ತೋರಿಸಿಕೊಟ್ಟಾಗ ಜನರಿಗೆ ಸನ್ಮಾರ್ಗದ ದರ್ಶನವಾಗುತ್ತದೆ. ಅಗ್ನಿಯಿಂದ ಲೋಕವನ್ನು ಸುಡಬಹುದು. ಅದೇ ಅಗ್ನಿಯಿಂದ ಆಹಾರವನ್ನು ರುಚಿಗೊಳಿಸಬಹುದು. ಬಳಸುವವನ ಸಂಸ್ಕಾರ ಮನೋಧರ್ಮಗಳು ಉತ್ತಮವಾಗಿರಬೇಕು. ತಾವು ತಮ್ಮ ಯೋಗಬಲದಿಂದ ಲೋಕದಲ್ಲಿ ಯಾವ ಜಾಲವನ್ನು ಮಾಡಬೇಕಾಗಿಲ್ಲವೆಂಬುದನ್ನು ತಿಳಿಸಿದರು. ಭುಜಲಿಂಗಸ್ವಾಮಿಗಳವರಿಗೆ ನಿಜಗುಣರ ವಿಚಾರಶಕ್ತಿ ಯೋಗಪ್ರತಿಭೆಗಳನ್ನು ತಿಳಿದು ಆನಂದವಾಯಿತು. ಮುಪ್ಪಿನ ಷಡಕ್ಷರಿಗಳಿಗೆ ನಿಜಗುಣರ ವ್ಯಕ್ತಿತ್ವದ ಅರಿವಾಯಿತು. ಗುರುಸನ್ನಿಧಿಯಲ್ಲಿ ಕೆಲವು ದಿನಗಳಿದ್ದು ಅವರ ಅನುಗ್ರಹ ಆಶೀರ್ವಾದವನ್ನು ಪಡೆದು ಈರ್ವರೂ ಮರಳಿ ಶಂಭುಲಿಂಗನ ಸನ್ನಿಧಿಗೆ ವಾಪಸಾದರು.

ಶಂಭುಲಿಂಗನ ಬೆಟ್ಟದಲ್ಲಿ ಯಥಾಪ್ರಕಾರ ಶಿವಗೋಷ್ಠಿ, ತತ್ವೋಪದೇಶಗಳು ನಡೆಯಲಾರಂಭಿಸಿದುವು. ನಿಜಗುಣರು ಅಲ್ಲಿಯೇ ಲೋಕವಿಖ್ಯಾತರಾಗುವಂತಹ ಕೃತಿಗಳನ್ನು ರಚಿಸಿದರು. ತಮ್ಮ ವಿಚಾರಧಾರೆಯಿಂದ ಜನರನ್ನು ಪುನೀತರಾಗಿ ಮಾಡಿದರು. ಈ ರೀತಿ ಅನಂತಕಾಲವವರೆಗೆ ಬೆಟ್ಟದಲ್ಲೇ ನೆಲಸಿದ್ದು ಶುಭದಿನ ಒಂದು ಶಿವಯೋಗಸಮಾಧಿಯಲ್ಲಿ ಸೇರಿದರು. ಇದು ಅವರ ಜೀವನದ ಮೂರನೆಯ ಮತ್ತು ಅಂತಿಮ ಅಧ್ಯಾಯ. ಇವಿಷ್ಟು ಜನಜನಿತವಾದ ಕಥೆಯಾಗಿ ಬಂದಿದೆ. ಇದನ್ನೂ ಕೆಲವರು

ಸಂಗ್ರಹಿಸಿ ಪ್ರಕಟಿಸಿರುವುದು ನಮ್ಮ ಸುಯೋಗ.[1] ಈ ಕಥೆಯಲ್ಲಿ ಸತ್ಯವೆಷ್ಟೋ ಕಾಲ್ಪನಿಕವೆಷ್ಟೋ ಹೇಳಲಾಗುವುದಿಲ್ಲ. ಮಹಾನು ಭಾವರ ವಿಷಯದಲ್ಲಿ ಪವಾಡಗಳನ್ನು ಹೇಳುವುದು ಭಾರತೀಯ ರಿಗೆ ಸಹಜವಾಗಿ ಬಂದಿದೆ. ಜಗತ್ತಿನ ಎಲ್ಲ ಮಹಾನುಭಾವರ ಜೀವನದಲ್ಲೂ ಇಂತಹ ಕಲ್ಪನೆಗಳು ಬಂದೇ ಬರುತ್ತವೆ. ಏಸು ಕ್ರಿಸ್ತನ ಪುನರುತ್ಥಾನದ ಕಥೆ, ಗ್ರೀಕ್ ಪುರಾಣಗಳಲ್ಲಿ ಹೋಮ ರನ ಕೃತಿಗಳಲ್ಲಿ ಇಂತಹ ಪವಾಡಕೃತಿಗಳು ಎಷ್ಟೋ ಬರುತ್ತವೆ. ಅಷ್ಟಾದಶಪುರಾಣಗಳಲ್ಲಿ ರಾಮಾಯಣ ಮಹಾಭಾರತಗಳಲ್ಲಿ ಇಂತಹ ಘಟನಾವಳಿಗಳಿಲ್ಲವೆ? ಕಂಭದಿಂದ ನರಸಿಂಹನ ಅವತಾರ ದಲ್ಲಿ ಪರಮಾತ್ಮ ಬಂದುದು, ತುಂಬಿದ ಸಭೆಯಲ್ಲಿ ದ್ರೌಪದಿಗೆ ಉಟ್ಟಸೀರೆ ಅಕ್ಷಯವಾಗುವುದು, ರಾವಣನ ಸಂಹಾರಾನಂತರ ರಾಮ ಸೀತೆಯರು ಪುಷ್ಪಕ ವಿಮಾನದಲ್ಲಿ ಬಂದುದು, ಮುಂತಾಗಿ ಸಹಸ್ರಾರು ನಿದರ್ಶನಗಳು ಸಿಕ್ಕುತ್ತವೆ. ವ್ಯಾಸ ವಾಲ್ಮೀಕಿಯರು ಹೇಳಿದ ಪವಾಡಕ್ಕೆ ಮಹತ್ವ ಕೊಡಬೇಕು, ಸಾಮಾನ್ಯರ ನುಡಿಗೆ ಬೆಲೆಯಿಲ್ಲ ಎನ್ನುವುದಕ್ಕಾಗುವುದಿಲ್ಲ. ಮಹಾನುಭಾವರನ್ನು ಅರ್ಥಮಾಡಿಕೊಳ್ಳುವವರ ಸಂಸ್ಕಾರ ಭೇದಕ್ಕನುಗುಣವಾಗಿ ಅವರ ಜೀವನಚಿತ್ರಗಳು ರಚನೆಯಾಗುತ್ತವೆ. ಆದರೆ ನಿಜಗುಣ ರನ್ನು ಅವರ ಪವಾಡಶಕ್ತಿಯಿಂದ ಅಳತೆಮಾಡಬೇಕಾದ ಅಗತ್ಯ ವಿಲ್ಲ. ಅವರ ಕೃತಿಗಳೇ ಅವರನ್ನು ಅಮರರಾಗಿ ಮಾಡಿವೆ. ಶತ ಮಾನಗಳ ಹಿಂದಿನಿಂದಲೂ ಜನರು ಅವರಲ್ಲಿ ಎಷ್ಟು ಪೂಜ್ಯ ಭಾವನೆಯನ್ನಿಟ್ಟಿದ್ದರೆಂಬುದಕ್ಕೆ ಜೀವನದ ಕಥೆಯ ರೂಪ ಸಹ

---

[1] ಷಡುಷಷ್ಟಿ ಪುರಾತನರ ಪುರಾಣ, ಶ್ರೀ ಸಿದ್ಧಲಿಂಗಾರ್ಯರ್, ಸಾಲಿಮಠ ರೋಣ ಇವರ ಪ್ರಕಟಣೆ.

ಕಾರಿಯಾಗಬಲ್ಲುದು. ಈ ದೃಷ್ಟಿಯಿಂದ ಅವರ ಜೀವನ ಚರಿತ್ರೆ ನಮಗೆ ಸಿಕ್ಕದಿದ್ದರೂ ಈ ಕಥೆಯಾದರು ದೊರೆತಿರುವುದು ಸಂತೋಷಾರ್ಹ.

## ೩. ಕಾಲವಿಮರ್ಶೆ

ನಿಜಗುಣರ ಜೀವನವನ್ನು ಕುರಿತು ನಮಗೆ ಸಾಕಷ್ಟು ಚಾರಿತ್ರಿಕ ಅಂಶಗಳು ಇನ್ನೂ ದೊರೆತಿಲ್ಲ. ಅದಕ್ಕೆ ಸಾಕಷ್ಟು ಪ್ರಯತ್ನವೂ ನಡೆದಿಲ್ಲ. ಅವರ ಕಾವ್ಯಾಧಾರದ ಮೇಲೆ ಅವರ ಕಾಲನಿರ್ಣಯಕ್ಕೆ ಸಾಕಷ್ಟು ಚರ್ಚೆ ನಡೆದಿದೆ. ಆದರೂ ಸಹ ಇನ್ನೂ ನಿಶ್ಚಿತವಾಗಲಿಲ್ಲ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮೂವರು ನಿಜಗುಣರ ಹೆಸರಿನವರು ದೊರೆತಿದ್ದಾರೆ. (೧) ನಿಜಗುಣದೇವ ಈತನು ಸುಮಾರು ಕ್ರಿ ಶ. ೧೧೬೦ರಲ್ಲಿದ್ದವನು. "ನಿಜಗುಣಯೋಗಿ" ಎಂಬ ಅಂಕಿತವನ್ನು ಇಟ್ಟುಕೊಂಡು ವಚನಗಳನ್ನು ರಚಿಸಿರುವ ವಚನಕಾರ. (೨) ನಿಜಗುಣಾರ್ಯ. ಕ್ರಿ.ಶ. ಸುಮಾರು ೧೬೫೦ರಲ್ಲಿದ್ದವನು. ಅದ್ವೈತ ರಾಮಾಯಣದ ಕರ್ತೃ. (೩) ನಿಜಗುಣಶಿವಯೋಗಿ. ಈತನ ಕಾಲ ಸುಮಾರು ಹದಿನಾಲ್ಕನೇ ಶತಮಾನದ ಅಂತ್ಯ, ಹದಿನೈದನೇ ಶತಮಾನದ ಆದಿಯಲ್ಲಿರಬಹುದೆಂದು ಊಹಿಸಲಾಗಿದೆ. ಈತನೇ ಈ ಕೃತಿಗೆ ಸಂಬಂಧಿಸಿದ ಶಿವಯೋಗಿ. ಪ್ರೊ॥ ಜಿ. ಎಂ. ಉಮಾಪತಿಶಾಸ್ತ್ರಿಗಳವರು ಸಂಪಾದಿಸಿದ ವಿವೇಕ ಚಿಂತಾಮಣಿಯ ಪ್ರಸ್ತಾವನೆಯಲ್ಲಿ ವಿವರಣೆಯಿದೆ.

ನಿಜಗುಣಶಿವಯೋಗಿಗಳು ಐತಿಹಾಸಿಕ ವ್ಯಕ್ತಿಯೆಂಬುದು ನಿರ್ವಿವಾದ. ಅವರು ಸಿದ್ಧ ಮಹಾನುಭಾವರೆಂಬುದು ಎಲ್ಲರಿಗೂ ನಂಬಿಗೆಯಾದ ವಿಷಯ. ಅವರ ವೈರಾಗ್ಯ ಅಮೋಘವಾದುದು.

ಅವರ ಕೃತಿಗಳಲ್ಲಿ ಅಲ್ಲಲ್ಲಿ ಅವರ ಹೆಸರು ಬರುತ್ತದೆ. ಆದರೆ ಚಾರಿತ್ರಿಕ ವಿಷಯಗಳಿಗೆ ಸಾಕಷ್ಟು ಸಾಧನ ದೊರೆಯುವುದಿಲ್ಲ. ಪರಮಾನುಭವ ಬೋಧೆಯಲ್ಲಿ—

ಅನಿಮಿತ್ತಬಾಂಧವನನುಪಮಾನಂದಾಬ್ಧಿ ।
ವಿನಯಾದಿ ಗುಣಗಣ ಮಂಡನ ॥
ಜನನವಿದೂರ ನಧಿಕ ವಿದ್ಯಾಸಂಪನ್ನ ।
ನೆನಿಸಿ ರಾಜಿಪ "ನಿಜಗುಣಯೋಗಿ" ॥[1]

ಮತ್ತೊಂದೆಡೆಯಲ್ಲಿ

ಶ್ರೀ ಕೃಪಾಕರನೆನಿಸುವ "ನಿಜಗುಣಯೋಗಿ" ಲೋಕ ಹಿತಾರ್ಥವೆನಲು ಪೇಳ್ದ[2] ಮತ್ತು ಗ್ರಂಥದ ಕೊನೆಯಲ್ಲಿ—

ಶ್ರೀಶಂಭುಸತ್ಕೃಪಾಕಟಾಕ್ಷಸಾಂದ್ರಚಂದ್ರಿಕಾಸಂಕ್ರಾಂತ ನಿರಸ್ತನಿಖಿಲಸಂಸಾರಶ್ರಮ ವಿಸ್ಫುರಿತನಿಜಾನಂದಮಕರಂದಾಸ್ವಾದನಾಸಕ್ತ ಚಿತ್ತೋಪೇತ "ನಿಜಗುಣಶಿವಯೋಗಿ" ವರ್ಯ ವಿರಚಿತ ಪರಮಾನುಭವ ಬೋಧಾನಾಮ ಪ್ರಕರಣಂ ಸಮಾಪ್ತ ಮಾದುದು ಎಂದಿದ್ದಾರೆ.

ಅವರ ಮತ್ತೊಂದು ಕೃತಿಯಾದ ಪರಮಾರ್ಥಪ್ರಕಾಶಿಕೆಯಲ್ಲಿ ಪ್ರಾರಂಭದಲ್ಲಿ "ಸತ್ಯ ಸ್ವಯಂಪ್ರಕಾಶ ಸಂವಿದ್ರೂಪವಾದ ಶಂಭುಲಿಂಗದನುಮತದಿಂ ಸಮ್ಯಗ್‌ಜ್ಞಾನ ಸಂಪನ್ನನೆನಿಪ ನಿಜಗುಣಶಿವಯೋಗಿಯು" ಎಂದು ಹೇಳಿಕೊಂಡಿದ್ದಾರೆ. ಮತ್ತೆ ಅದೇ ಗ್ರಂಥದ ಸಮಾಪ್ತಿಯಲ್ಲಿ "ಇದು ನಿಜಗುಣ ಶಿವಯೋಗಿ ಶಂಭುಲಿಂಗದೊಲವಿಂದ" ಎಂದು ಹೇಳಿದ್ದಾರೆ.

---

1 ಪರಮಾನುಭವ ಬೋಧೆ ಸಂಧಿ ೧ ಪದ್ಯ ೮

2 ಅದೇ, ಸಂಧಿ ೬ ಸೂತ್ರ ೨೨

"ಇಂತು ನಿಜಗುಣಯೋಗಿ ಸಂತಸದೊಳೊರೆದಿದನ। ಸಂತ ಮಹಿಮಾಂಬುನಿಧಿ ಶಂಭು ತಾನೊಪ್ಪಿ ಸಂತರಿಂ ಪಾಡಿಸುತ ಮಿರ್ಕೆ" ಎಂದು ಅವರ ಪುರಾತನರ ಸ್ತೋತ್ರ ಕೃತಿ ಮುಗಿಯುತ್ತದೆ.

ಗದ್ಯ॥ ಶ್ರೀಗುರುಶಂಭುಲಿಂಗನೊಲವಿನಿಂ "ಶ್ರೀನಿಜಗುಣ ಶಿವಯೋಗೀಂದ್ರ" ವಿರಚಿತವಾದ ಅಬಾಲವೃದ್ಧರಿಗಾಯಾಸವಿನಿತಿಲ್ಲದಂತೆ ಸರ್ವಜ್ಞಾನಿಗಳೊಡಂಬಡುವಂತೆ ಸಕಲವೇದ ವೇದಾಂತಾಗಮಸ್ಮೃತಿಪುರಾಣೇತಿಹಾಸ ಸೂತ್ರಾದಿಶಾಸ್ತ್ರ ಸಮ್ಮತದಿಂ ಪುರಾತನಗೀತಾನುಗುಣ್ಯವೆನಿಸಿ "ಕೈವಲ್ಯಪದ್ಧತಿ" ಯೆಂಬ ಪೆಸರನಿಟ್ಟು . . . . " ಎಂದು ಕೈವಲ್ಯಪದ್ಧತಿ ಕೃತಿಯು ಮುಗಿಯುತ್ತದೆ.

ಇತಿಹಾಸ ಪುರಾಣ ಸ್ಮೃತಿ।
ಶೃತಿಯರ್ಥವನಿಂತು ಕನ್ನಡಿಸಿದಂ "ನಿಜಗುಣಂ॥
ಯತಿ" ಶಂಭುಲಿಂಗದೊಲವಿಂ।
ಕ್ಷಿತಿಯುಮುಮುಕ್ಷುಗಳಿದಂ ಪರೀಕ್ಷಿಪುದನಿಶಂ॥

ಎಂದು ಪರಮಾರ್ಥಗೀತೆಯುಲ್ಲಿ ಅಂತ್ಯದಲ್ಲಿ ಹೇಳಿದೆ.

"ಗುರುಬೋಧೆಯಿಂ ಪರಾತ್ಪರವಪ್ಪ ಚಿತ್ತು ತ। ನ್ನಿರವೆಂದು ನಿಜಮನರಿದ ನಿಜಗುಣಶಿವಯೋಗಿ। ವಿರಚಿಸದನೀ ಕೃತಿಯುನಲ್ಲಿ "[1] ಮತ್ತೆ

ಇಂತು "ನಿಜಗುಣಶಿವಯೋಗಿ" ಸಂತಸದೊಳೊರೆದಿದನ।

---

1 ಅನುಭವಸಾರ ಸಂಧಿ ೧, ಸೂತ್ರ ೨.

ನುತ ಮಹಿಮಾಂಬುನಿಧಿ ಶಂಭುತಾನೊಪ್ಪಿ। ಸಂತರಿಂ ಪಾಡಿ ಸುತವಿರ್ಕೆ "[1]

"ಮುಮುಕ್ಷುಜನಂಗಳೀ ಜಗತ್ತಿನ ಸ್ಥಿತಿಗತಿಗಳಾವಪ್ರಕಾರ ದಿಂದಿಹವೆಂದರಸಿ ಬಳಲದಭಿವ್ಯಕ್ತವಾಗಿಲ್ಲಿಯೆ ಸಲೀಲೆಯಿಂ ದರಿದು ಕೃತಾರ್ಥರಾಗಲೆಂದು ನಿಜಗುಣ ಶಿವಯೋಗಿ" ಬೆಳು ಗನ್ನಡವಾದ ವಚನರಚನೆಗಳಿಂ "ವಿವೇಕಚಿಂತಾಮಣಿ" ಯೆಂಬ ಪ್ರಕರಣಂ ವೇಳ್ವಸದೆಂತೆಂದೊಡೆ "[2]

ಇತ್ಯಾದಿಯಾಗಿ ಅವರ ಪ್ರತಿಯೊಂದು ಗ್ರಂಥದಲ್ಲಿ ನಿಜಗುಣ ಶಿವಯೋಗಿಯೆಂಬ ಹೆಸರು ಬರುವುದರಿಂದ ಇಂತಹ ಶಾಸ್ತ್ರ ಗ್ರಂಥಗಳ ಕರ್ತೃವೆನಿಸಿದ ನಿಜಗುಣಶಿವಯೋಗಿ ಚಾರಿತ್ರಿಕವ್ಯಕ್ತಿ ಯೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ತಮ್ಮ ಕೃತಿಗಳಲ್ಲಿ ನಿಜ ಗುಣರು ತಮ್ಮ ಹೆಸರನ್ನು ಮಾತ್ರ ಹೇಳಿಕೊಂಡಿರುವರೇ ಹೊರತು ತಮ್ಮ ಮಾತಾಪಿತೃಗಳ ಅಥವಾ ಜನ್ಮಸ್ಥಳದ ಹಾಗೂ ತಾವು ಬಾಳಿದ ಬಾಳಿನ ಕಥೆ ಕಾಲಗಳನ್ನು ಎಲ್ಲಿಯೂ ಹೇಳದಿರು ವುದು ಆಶ್ಚರ್ಯ. ಆದರೆ ಅವರ ಪ್ರಭಾವ ಅನ್ಯಕವಿಗಳ ಮೇಲೆ ಬೀರಿರುವುದನ್ನು ಅವಲಂಭಿಸಿ ವಿಮರ್ಶಕರು ಅವರ ಕಾಲವನ್ನು ನಿರ್ಣಯಿಸಲು ಯತ್ನಿಸಿದ್ದಾರೆ. ಆದಾಗ್ಯೂ ಅದು ನಿಶ್ಚಿತ ಅಂಶ ವೆಂದು ಒಪ್ಪಲು, ಅಸಾಧ್ಯವಾಗಿಯೇ ಉಳಿದಿದೆ. ಅದಕ್ಕೆ ಮುಖ್ಯ ವಾದ ಕಾರಣವೆಂದರೆ ಅವರ ಕೃತಿಗಳಲ್ಲಿ ಕಲ್ಯಾಣದ ಶರಣರ ಹೆಸರು ಬರದಿರುವುದು. ಕನ್ನಡನಾಡಿನ ಧಾರ್ಮಿಕ ಚರಿತ್ರೆಯಲ್ಲಿ ಹನ್ನೆರಡನೆಯ ಶತಮಾನದ ಕಲ್ಯಾಣದ ಕ್ರಾಂತಿ ಅಮರಘಟನೆ.

---

1 ಅನುಭವಸಾರ ಸಂಧಿ ೮, ಸೂತ್ರ ೫.

2 ವಿವೇಕ ಚಿಂತಾಮಣಿ ಪ್ರಾರಂಭದ ಗದ್ಯ.

ಅನಂತರ ಬಂದ ವೀರಶೈವ ಕವಿಗಳು ಬಸವಣ್ಣನವರೇ ಮೊದಲಾದ ಪ್ರಭೃತಿಗಳನ್ನು ಸ್ಮರಿಸದೇ ಕಾವ್ಯಗಳನ್ನು ಸಾಮಾನ್ಯವಾಗಿ ರಚಿಸಿರುವುದಿಲ್ಲ. ಆದುದರಿಂದ ಅವರು ಹನ್ನೆರಡನೆಯ ಶತಮಾನಕ್ಕಿಂತಲೂ ಹಿಂದಿನವರಿರಬೇಕೆಂದು ಕೆಲವರು ಊಹಿಸಿದ್ದರು. ಈ ನಿರ್ಧಾರಕ್ಕೆ ಮೇಲ್ಕಂಡ ಕಾರಣವು ಸಮರ್ಪಕವಾದುದಲ್ಲವೆಂದು ಸಂಶೋಧಕರು ತೀರ್ಮಾನಿಸಿದ್ದಾರೆ. ನಿಜಗುಣರ ಕೃತಿಗಳೇ ಈ ಊಹೆಯನ್ನು ದೂರಮಾಡುತ್ತವೆ. ಬಹುಕಾಲದವರೆಗೆ ಅಂದರೆ ಪ್ರಾಯಃ ಒಂದೆರಡು ಶತಮಾನದವರೆಗೆ ಬಸವಾದಿ ಪ್ರಮಥರು ವೀರಶೈವ ಕವಿಗಳ ಕಾವ್ಯಗಳಲ್ಲಿ ವಿವರಿಸಲ್ಪಟ್ಟಿಲ್ಲ.

ಕನ್ನಡಕವಿ ಚರಿತ್ರಕಾರರಾದ ಶ್ರೀ ಆರ್. ನರಸಿಂಹಾಚಾರ್ಯರು ನಿಜಗುಣರ ಕಾಲವನ್ನು ಕ್ರಿ.ಶ. ೧೫೦೦ ಇದ್ದಿರಬೇಕೆಂದು ಹೇಳಿದ್ದಾರೆ.[1] ನಿಜಗುಣರು ತಮ್ಮ ವಿವೇಕಚಿಂತಾಮಣಿಯಲ್ಲಿ ಉತ್ತರ ಮೀಮಾಂಸೆಯ ವಿಷಯವನ್ನು ಹೇಳುವಾಗ ಅಮಲಾನಂದರಿಂದ ರಚಿತವಾದ ಕಲ್ಪತರುವೆಂಬ ವ್ಯಾಖ್ಯಾನವನ್ನು ಪ್ರಸ್ತಾಪಿಸಿದ್ದಾರೆ. ಇವರ ಕಾಲ ೧೨೫೦ ಎಂದು ನಿರ್ಧರಿಸಲಾಗಿದೆ. ಇದೇ ಗ್ರಂಥದಲ್ಲಿ ಅಗ್ಗಳ (೧೧೮೯) ನೇಮಿಚಂದ್ರ (೧೧೮೦) ನಾಗಚಂದ್ರ (೧೧೦೦) ಮುಂತಾದ ಜೈನಕವಿಗಳ ಹೆಸರನ್ನು ಹೇಳಿದ್ದಾರೆ. ಈ ಕಾರಣಗಳಿಂದ ಪ್ರಕೃತದ ನಿಜಗುಣ ಶಿವಯೋಗಿಯು ಬಸವೇಶ್ವರರ ಕಾಲದಿಂದ ಅಂದರೆ ಹದಿಮೂರನೆಯ ಶತಮಾನಕ್ಕೆ ಈಚಿನವರೆಂಬುದು ನಿರ್ವಿವಾದ. ರಾಜಶೇಖರ ವಿಲಾಸವೆಂಬ ಚಂಪುಕಾವ್ಯವನ್ನು ಬರೆದ ಷಡಕ್ಷರಿಯು ತಮ್ಮ

---

1 ಕನ್ನಡ ಕವಿಚರಿತೆ ಭಾಗ ೨ ಪು. ೧೫೩.

ಕಾವ್ಯದಲ್ಲಿ ನಿಜಗುಣರನ್ನು ಸ್ಮರಿಸಿರುವುದರಿಂದ ಅವರು ಕ್ರಿ.ಶ. ೧೬೫೦ಕ್ಕಿಂತ ಹಿಂದಿನವರೆಂಬುದು ಗೊತ್ತಾಗುತ್ತದೆ. ಅಲ್ಲದೆ ನಿಜಗುಣರ ವಿವೇಕಚಿಂತಾಮಣಿ ಗ್ರಂಥವನ್ನು ಕ್ರಿ.ಶ. ೧೭೭೫ ರಲ್ಲಿ ಕೊಡಗಿನ ಲಿಂಗರಾಜರು ಸಂಸ್ಕೃತಕ್ಕೆ ಭಾಷಾಂತರಿಸಿದ್ದಾರೆ. ಅದರ ಆಧಾರದ ಮೇಲೆ ಅದೇ ಗ್ರಂಥವು ಶಾಂತಲಿಂಗದೇಶಿಕ ಎಂಬುವರಿಂದ ಮರಾಠಿಗೆ ಭಾಷಾಂತರಿಸಲ್ಪಟ್ಟಿದೆ. ಆದುದರಿಂದ ನಿಜಗುಣರು ಹದಿನಾರನೆ ಶತಮಾನಕ್ಕಿಂತ ಹಿಂದಿನವರೆಂದು ಗೊತ್ತಾಗುತ್ತದೆ. ಆದರೆ ನಿಜಗುಣರ ಕೆಲವು ಕೃತಿಗಳಲ್ಲಿ ಹದಿನೆಂಟನೆಯ ಶತಮಾನದ ಕೆಲವು ಸರಳಶಬ್ದಗಳು ಬಳಕೆಯಲ್ಲಿರುವುದರಿಂದ ಹದಿನೇಳನೆ ಶತಮಾನಕ್ಕಿಂತ ಈಚಿನವರಿರಬಹುದೆಂಬ ಊಹೆಗೂ ಅವಕಾಶವಿದೆ. ಈ ಊಹೆ ಸಮರ್ಪಕವಾದುದಲ್ಲ. ಜನಜನಿತವಾದ ಭಾಷೆ ಗ್ರಂಥಗಳಲ್ಲಿ ಅದರಲ್ಲಿಯೂ ಕಾವ್ಯಗಳಲ್ಲಿ ಬಳಕೆಗೆ ಬರುವ ಪದ್ಧತಿಯಿರಲಿಲ್ಲ. ನಿಜಗುಣರು ತಮ್ಮ ಅಮೋಘ ಶೈಲಿಯಲ್ಲಿ ಹಲವಾರುಕಡೆ ಜನಬಳಕೆಯ ಸಾಹಿತ್ಯವನ್ನು ಪ್ರಯೋಗಮಾಡಿ ಕೃತಿಗೆ ಮೆರಗು ಕೊಟ್ಟಿದ್ದಾರೆ. ಆದುದರಿಂದ ಅವರನ್ನು ಹದಿನೆಂಟನೆ ಶತಮಾನಕ್ಕೆ ತರಲು ಸಾಧ್ಯವೇ ಇಲ್ಲ. ಆದರೆ ಚಾರಿತ್ರಿಕ ಸಂಶೋಧನೆಯಿಂದ ಅವರ ಕಾಲಮಾನದ ಮೇಲೆ ಸಾಕಷ್ಟು ಬೆಳಕು ಬೀಳದಿರುವುದರಿಂದ ವಿಪುಲ ಚರ್ಚೆ ನಡೆದಿದೆ. ಕ್ರಿ.ಶ. ೧೫೦೦ ಇದ್ದಿರಬೇಕೆಂಬ ಬಹುಜನ ವಿದ್ವಾಂಸರ ಅಭಿಪ್ರಾಯ ಸಮರ್ಥನೀಯವಾಗಿದೆ. ಒಬ್ಬ ಕವಿಯ ಕೃತಿಯಲ್ಲಿ ಅವನ ಸಮಕಾಲೀನ ಜನಜೀವನವು ಪ್ರತಿಬಿಂಬಿಸಿರುವುದು ಸಹಜವಾಗಿರುವುದರಿಂದ ಕವಿಯ ಕಾಲಮಾನವನ್ನು ನಿರ್ಧರಿಸುವುದು ಅಗತ್ಯವಾಗುತ್ತದೆ. ಅಂತೆಯೇ ಕವಿಯ ಸಂದೇಶವನ್ನು ಅರಿಯಬೇಕಾದರೂ ಅವನ ಕಾಲಮಾನದ ಸ್ಥಿತಿಗಳನ್ನು

ಪರಿಶೀಲಿಸುವುದು ಅಗತ್ಯವಾದುದರಿಂದ ಕವಿಯ ಕಾಲ ನಿರ್ಣಯ ಕ್ಕಾಗಿ ಸಂಶೋಧಕರು ಶ್ರಮಪಡುತ್ತಾರೆ. ಈ ದೃಷ್ಟಿಯಿಂದ ನಿಜಗುಣರ ಕಾಲನಿರ್ಣಯಕ್ಕಾಗಿ ವಿಪುಲಚರ್ಚೆ ನಡೆದಿರುವುದು ಸಹಜ. ಅವರ ಕೃತಿಗಳಲ್ಲಿ ಪ್ರತಿಬಿಂಬಿಸುವ ತಾತ್ತ್ವಿಕ ಧ್ವನಿಯೂ ಸಹ ಹದಿನೈದನೆಯ ಶತಮಾನವನ್ನೇ ಅವಲಂಬಿಸಿರುವುದರಿಂದ ಕವಿ ಚರಿತ್ರೆಕಾರರ ಅಭಿಪ್ರಾಯ ಮಾನ್ಯವಾಗಿದೆ.

## ೪. ಕವಿಯ ಮತನಿರ್ಣಯ

ನಿಜಗುಣ ಶಿವಯೋಗಿಯ ಜೀವನಚರಿತ್ರೆಗೆ ಅಧಿಕೃತ ಆಧಾರ ಗಳು ಇದುವರೆಗೂ ದೊರೆಯದೇ ಇರುವುದರಿಂದ ಅವರು ಯಾವ ಮತ ಯಾವ ಪಂಥಕ್ಕೆ ಸೇರಿದವರೆಂಬುದರ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಮೂಡಿರುವುದು ಸಹಜ. ಭಾರತದಲ್ಲಿ "ನಾನೃಷಿಃ ಕುರುತೇ ಕಾವ್ಯಂ" ಎಂಬ ಆರ್ಯೋಕ್ತಿ ಪ್ರಚಲಿತ ವಾಗಿದೆ. ಅಂತೆಯೇ ಪ್ರತಿಯೊಂದು ಪ್ರಾಚೀನ ಕಾವ್ಯವೂ ಒಬ್ಬೊಬ್ಬ ಕವಿಯ ತಪೋಮಯ ಜೀವನದ ಮಹಾಸಾಧನೆ. ಕನ್ನಡನಾಡಿನಲ್ಲಿಯೂ ಸಹ ಕವಿಗಳು ತಮ್ಮ ತಮ್ಮ ಧರ್ಮ ದರ್ಶನಗಳನ್ನು ಅವಲಂಬಿಸಿ ಕೃತಿರಚನೆ ಮಾಡಿದ್ದಾರೆ. ಆದುದ ರಿಂದ ಪ್ರಾಚೀನ ಕಾವ್ಯಗಳಲ್ಲಿ ಬಹುಭಾಗ ಮತ ಪಂಥಗಳನ್ನು ಕುರಿತಾದ ಕೃತಿಗಳಾಗಿವೆ. ಯಾವುದೇ ಒಬ್ಬ ಐತಿಹಾಸಿಕ ವ್ಯಕ್ತಿ ಜೀವನವನ್ನೇ ಕಾವ್ಯರೂಪದಲ್ಲಿ ಚಿತ್ರಿಸಿದರೂ ಸಹ ಅದರಲ್ಲಿಯೂ ತಮ್ಮ ಧರ್ಮತತ್ವಗಳನ್ನೇ ಬೆಳಗಿಸಿರುವುದನ್ನು ನಾವು ಕಾಣ ಬಹುದು. ಕೆಲವಾರು ಕಾವ್ಯಗಳು ತಮ್ಮ ಧರ್ಮಪ್ರಚಾರ ಕ್ಕಾಗಿಯೇ ರಚಿತವಾಗಿವೆ. ಆದುದರಿಂದ ಕೆಲವು ಕವಿಗಳು ತಮ್ಮ ಕಾಲಮಾನ ಮತ್ತು ತಮ್ಮ ಮತ ಪಂಥಗಳನ್ನು ತಮ್ಮ ಕಾವ್ಯ

ಗಳಲ್ಲಿ ಹೇಳಿಕೊಂಡಿದ್ದಾರೆ. ನಿಜಗುಣರು ತಮ್ಮ ಪೂರ್ವಾಶ್ರಮದ ವಿಷಯದಲ್ಲಿ ಏನೂ ಹೇಳದೇ ಇರುವುದರಿಂದಲೂ ಮತ್ತು ಅವರು ಭಾರತದ ಎಲ್ಲ ಧರ್ಮಗಳ ಹಿರಿಮೆಯನ್ನು ಪ್ರಶಂಸಿಸಿರುವುದ ರಿಂದಲೂ ಅವರ ಮತ ವಿಚಾರದಲ್ಲಿಯೂ ವಿಮರ್ಶೆ ನಡೆಯ ಬೇಕಾದುದು ಸೂಕ್ತವೇ ಆಗಿದೆ.

ಕನ್ನಡ ಕವಿಚರಿತ್ರಕಾರರು ನಿಜಗುಣ ಶಿವಯೋಗಿಯ ವಿಚಾರ ವನ್ನು ಬರೆಯುವಾಗ "ಇವನು ವೀರಶೈವ ಕವಿ, ಇವನಿಗೆ ನಿಜಗುಣಾರಾಧ್ಯ ಎಂಬ ಹೆಸರೂ ಉಂಟು" ಎಂದು ಬರೆದಿದ್ದಾರೆ.[1] ಹೆಸರಿನ ಕೊನೆಯಲ್ಲಿ ಆರಾಧ್ಯ ಎಂಬ ಹೆಸರನ್ನು ವೀರಶೈವರಲ್ಲದೆ ಸಾಮಾನ್ಯವಾಗಿ ಯಾರೂ ಇಟ್ಟುಕೊಳ್ಳುವುದಿಲ್ಲ. ಇದರಿಂದಲೂ ಇವರು ವೀರಶೈವರೆಂದು ಹೇಳಬಹುದಾಗಿದೆ. ಕನ್ನಡ ಸಾಹಿತ್ಯದ ಇತಿಹಾಸವನ್ನು ಸಂಶೋಧನಾತ್ಮಕವಾಗಿ ವಿಚಾರಮಾಡಿದ ಇ. ಪಿ. ರೈಸ್‌ರವರು ನಿಜಗುಣರನ್ನು ವೀರಶೈವ ಕವಿಗಣದಲ್ಲಿ ಸೇರಿಸಿ ಅವರನ್ನು ದೊಡ್ಡ ವಿದ್ವಾಂಸ ರೆಂದೂ ಪ್ರತಿಭಾವಂತ ಗ್ರಂಥಕರ್ತೃವೆಂದೂ ಹೇಳಿದ್ದಾರೆ.[2] ಮತ್ತೊಬ್ಬ ಸಾಹಿತಿಗಳಾದ ಶ್ರೀ ಮುಗಳಿಯವರೂ ನಿಜಗುಣರ ಕೃತಿಗಳಲ್ಲಿ ಬರುವ ವೀರಶೈವ ಪಾರಿಭಾಷಿಕ ಶಬ್ದಗಳನ್ನು ಉಲ್ಲೇಖಿಸಿ ನಿಜಗುಣ ಶಿವಯೋಗಿ ವೀರಶೈವನೇನೋ ನಿಜ ಎಂದು ಹೇಳಿದ್ದಾರೆ.[3] ಅಲ್ಲದೆ ಪ್ರಾಚೀನ ಕಾವ್ಯಗಳಲ್ಲಿ ಕವಿಗಳು ಸಾಮಾನ್ಯವಾಗಿ ತಮ್ಮ ಧರ್ಮಾನುಯಾಯಿಗಳಾದವರನ್ನೂ

---

1 ಕನ್ನಡ ಕವಿಚರಿತ್ರೆ, ಭಾಗ ೨, ಪು. ೧೫೩.

2 A History of Canarese Literature, p. 71.

3 ಕನ್ನಡ ಸಾಹಿತ್ಯ ಚರಿತ್ರೆ, ಪು. ೩೨೬.

ತಮ್ಮ ದೀಕ್ಷಾಗುರುಗಳನ್ನೂ ಸ್ಮರಿಸುವುದು ಸ್ವಾಭಾವಿಕವಾಗಿದೆ.
ಅಂತೆಯೇ ವೀರಶೈವ ಕವಿಗಳಾದ ಶ್ರೀ ಷಡಕ್ಷರ ಶಿವಯೋಗಿಗಳು
ತಮ್ಮ ಚಂಪೂ ಕಾವ್ಯ 'ರಾಜಶೇಖರ ವಿಳಾಸ'ದಲ್ಲಿ ಅವರನ್ನು
ಸ್ಮರಿಸುತ್ತಾ—

ಕಂ॥ ಸುಜನವರ ನತಪದನ ಸದ।
ಸುಜನವರದ ನತುಳನಾದ ರಸಿಕನ ವಿಳಸ॥
ನ್ನಿಜಗುಣಯೋಗಿಯ ನಿರುಪಮ।
ನಿಜಗುಣಯೋಗಿಯ ಪದಾಬ್ಜಕಾನತನಪ್ಪೆಂ॥[1]

ಎಂದು ಸ್ತುತಿಸಿದ್ದಾರೆ.

ಮತ್ತೊಬ್ಬ ವೀರಶೈವ ಕವಿಯಾದ ವೀರಭದ್ರನು ತನ್ನ
ಅರವತ್ತುಮೂವರ ಪುರಾಣದಲ್ಲಿ ನಿಜಗುಣರನ್ನು ನುತಿಸುತ್ತಾ

ಭಾ॥ ಷ॥ ಶರಧಿಮಥನದಿ ಪುಟ್ಟಿದಮೃತಮಂ ನೆರೆಸವಿದು।
ಮರಣಮಂ ಗೆಲಿದು ಸುಖಿಮುಯರೆನಿಸಿದಸುರಾರರು
ಧರೆಯೊಳು ತವಾನನಾಬ್ಧಿಯೊಳು ನಿರ್ಮಥನದಿಂ ಕವಿತೆ
ಎಂಬಮೃತ ಮುದಿಸಿ।
ನೆರೆಪುಣ್ಯ ಜೀವಿಯೊಳು ಬೆರೆಸಿ ಜಡಜೀವಮಂ।
ಪರಮನೆಂದೆನಿಸಿ ಪರಮಾಹವೆಂದೆಂಬ ಸು।
ಸ್ಥಿರತೆಯಾನಂದದೊಳೇರಕಮಾದ ನಿಜಸುಖವನೆನಗೀವುದೈ
ನಿಜಗುಣವಿಭೋ॥[2]

ಎಂದಿದ್ದಾರೆ. ಈ ಕಾರಣದಿಂದಲೇ ಅವರು ವೀರಶೈವರೆಂದು
ಹೇಳುವುದು ನಮ್ಮ ಅಭಿಪ್ರಾಯವಲ್ಲ. ಆಯಾ ಪ್ರಾರ್ಥನಾ

1 ರಾಜಶೇಖರವಿಳಾಸಂ. ಪ್ರಥಮಾಶ್ವಾಸ. ಪದ್ಯ ೧೬.

2 ಅರವತ್ತುಮೂವರ ಪುರಾಣಂ. ಪೀಠಿಕಾ ಸಂಧಿ, ಪದ್ಯ ೯.

ಪದ್ಯದ ಅಂತರಾರ್ಥದಿಂದ ಮಾತ್ರ ಅವರು ವೀರಶೈವರೇ ಎಂಬುದಕ್ಕೆ ಪುಷ್ಟಿ ದೊರೆಯುತ್ತದೆ. ಆದರೆ ಹತ್ತೊಂಬತ್ತನೆ ಶತಮಾನದಿಂದ ಈಚೆಗೆ ವಿಮರ್ಶಾತ್ಮಕ ಸಾಹಿತ್ಯ ಬೆಳೆದುದರಿಂದ ವೀರಶೈವೇತರರುಗಳು ಸಹ ನಿಜಗುಣರನ್ನು ಅವರ ಪಾಂಡಿತ್ಯ ದೃಷ್ಟಿಯಿಂದ ವಿಚಾರಮಾಡಿ ತಮ್ಮ ಕಾವ್ಯಗಳಲ್ಲಿ ಸ್ಮರಿಸಿದ್ದಾರೆ. ಉದಾಹರಣೆಗೆ ವಿದ್ವಾಂಸರಾದ ಶ್ರೀ ಶಿವರಾಮಶಾಸ್ತ್ರಿಗಳು ತಮ್ಮ ಅಮೋಘ ಕೃತಿಯಲ್ಲಿ—

ಭಾ॥ ಷ॥ ಸುಜನರೊಪ್ಪುವತೆರದೆ ಶ್ರುತಿಗಳ।
ನಿಜರಹಸ್ಯವ ತೋರಿ ಮನುಜರ।
ವೃಜಿನವನು ನೆರೆಕಳೆದು ಶುದ್ಧಾದ್ವೈತ ಮಾರ್ಗದಲಿ॥
ರಜತಗಿರಿಪತಿಯೊಡನೆ ಬೆರೆದಿಹ।
ನಿಜಗುಣಾರ್ಯನು ಎನ್ನಹೃದಯಾಂ।
ಬುಜದೊಳಗೆ ನೆಲಸಿರಲಿ ಬಿಡದನವರತ ಮುದದಿಂದ ॥[1]

ಎಂದು ಸ್ಮರಿಸಿದ್ದಾರೆ. ಅವರ ಕಾವ್ಯಪ್ರತಿಭೆಯನ್ನು ಮನಸಾರ ಪ್ರಶಂಸಿಸಿದ್ದಾರೆ. ಅಲ್ಲದೆ ಇವನು ವೀರಶೈವನಲ್ಲದೆ ಮತ್ತಾವ ಮತಕ್ಕೆ ಸೇರಿದವನೆಂಬುದನ್ನು ನಿರ್ಧರಿಸಲು ಯಾವ ಕಾರಣ ಗಳೂ ದೊರೆಯುವಂತಿಲ್ಲ. ಆದುದರಿಂದ ಆತನು ವೀರಶೈವನೆಂದು ನಿಸ್ಸಂಶಯವಾಗಿ ಹೇಳಬಹುದಾಗಿದೆ.

## ೫. ನಿಜಗುಣರ ಆತ್ಮಶ್ರೀ

ನಿಜಗುಣ ಶಿವಯೋಗಿಗಳು ಮಾನವಕೋಟಿಗೆ ಲಭ್ಯವಾದ ಅಪೂರ್ವ ಸಂಪತ್ತು. ಅವರು ಹಲವಾರು ದೃಷ್ಟಿಯಿಂದ ಅಪಾರ

---

1 ಬ್ರಹ್ಮಾನಂದಬೋಧೆ. ಪೀಠಿಕೆ. ಪದ್ಯ ೪.

ಸಂಪತ್ತಾಗಿದ್ದಾರೆ. ಅವರನ್ನು ಭಿನ್ನ ಭಿನ್ನ ಜನರು ಭಿನ್ನ ಭಿನ್ನ ದೃಷ್ಟಿಯಿಂದ ನೋಡುತ್ತಾರೆ. ವೇದಾಂತಿಗಳು ಅವರನ್ನು ಕೇವಲಾದ್ವೈತಿಗಳೋ ಅಥವಾ ಶಿವಾದ್ವೈತಿಗಳೋ ಎಂದು ವಿಪುಲ ವಿಮರ್ಶೆಯನ್ನೇ ನಡೆಸಿದ್ದಾರೆ. ಶಿವಯೋಗಿಗಳು ಅವರು ಜ್ಞಾನಯೋಗಿಗಳೋ ಶಿವಯೋಗಿಗಳೋ ಎಂದು ನಿಶ್ಚಯಿಸಲು ಯತ್ನಿಸಿದ್ದಾರೆ. ಅವರು ಕರ್ಮ, ಜ್ಞಾನ ಮತ್ತು ಭಕ್ತಿಯೋಗ ದಲ್ಲಿ ಯಾವುದನ್ನು ಅವಲಂಬಿಸಿರುವರೆಂದು ಯೋಗಶಾಸ್ತ್ರ ಕೋವಿದರು ವಿಚಾರಮಾಡಿದ್ದಾರೆ. ಸಂಗೀತಗಾರರು ಅವರ ಸಂಗೀತಶಾಸ್ತ್ರಜ್ಞಾನವನ್ನು ಕಂಡು ಮುಗ್ಧರಾಗಿದ್ದಾರೆ. ಸಾಹಿತಿ ಗಳು ಅವರ ಸಾಹಿತ್ಯಸಂಪತ್ತು, ಶೈಲಿ ಪಾಂಡಿತ್ಯ ಪ್ರತಿಭೆಗೆ ಮಾರುಹೋಗಿದ್ದಾರೆ. ಅಭಿಮಾನಿಗಳು ನಿಜಗುಣರ ನೈತಿಕ ಸಂದೇಶವನ್ನು ಆರಿಸಿ ಅನುಭವಿಸಿ ಆನಂದಪಟ್ಟಿದ್ದಾರೆ. ಶಿವ ಯೋಗಿಗಳು ಈ ಎಲ್ಲರ ದೃಷ್ಟಿಯಿಂದಲೂ ಕನ್ನಡನಾಡಿನ ಸಂಪತ್ತು, ಭಾರತದ ದಾರ್ಶನಿಕ ಸಂಪತ್ತು ಮತ್ತು ವಿಶ್ವ ಮಾನವತ್ವ ದರ್ಶನದ ಮಹಾಸಂಪತ್ತಾಗಿ ಬೆಳಗಿದ್ದಾರೆ. ಅವರ ಆತ್ಮಶ್ರೀಯ ಸಿರಿಯು ಈ ಎಲ್ಲ ಮುಖದಲ್ಲೂ ಪ್ರತಿಭಾನ್ವಿತವಾಗಿ ಪ್ರಕಾಶಿಸಲ್ಪಟ್ಟಿದೆ. ಅವುಗಳ ಸೂಕ್ಷ್ಮ ವಿವೇಚನೆ ಇಲ್ಲಿ ಅಪ್ರಸ್ತುತ ವಲ್ಲವಷ್ಟೆ !

**ವೇದಾಂತಸಂಪತ್ತು**

ನಿಜಗುಣರ ವೇದಾಂತಜ್ಞಾನ ಅಪಾರವಾದದ್ದು. ಶಂಕರಾ ಚಾರ್ಯರೇ ಮೊದಲಾದ ಮಹಾವಿದ್ವಾಂಸರು ನಡೆಸಿರುವ ಕೇವಲಾದ್ವೈತ ವಿಚಾರವಿಮರ್ಶೆಯನ್ನು ತಮ್ಮ ವಿವೇಕಚಿಂತಾ ಮಣಿಯಲ್ಲಿ ವಿವರಿಸಿರುವುದು ಗಮನಾರ್ಹವಾಗಿದೆ. ಯಾವುದನ್ನು

ನಾವು ತರ್ಕಪಾಂಡಿತ್ಯದಿಂದ ಪರಿಹರಿಸಲು ಅಶಕ್ಯವೋ ಅದನ್ನು ಸುಂದರ ಸುಲಭ ಉದಾಹರಣೆಗಳನ್ನಿತ್ತು ಶಿವಯೋಗಿಗಳು ಅರಿವು ಮಾಡಿಕೊಡುತ್ತಾರೆ. ಉಪನಿಷದಾದಿಗ್ರಂಥಗಳ ಸಂದೇಶವನ್ನು ಸಾರಿ ಕೃತಿರಚನೆ ಮಾಡಿರುವುದರಿಂದ ಅವರನ್ನು ಅದ್ವೈತಿಗಳೆಂದೇ ಕೆಲವರು ಭಾವಿಸಿರುವುದು ಆಶ್ಚರ್ಯವೇನಲ್ಲ. ನಿಜಗುಣರ ಅದ್ವೈತ ಸಾಹಿತ್ಯವನ್ನು ಒಂದು ದೃಷ್ಟಿಯಿಂದ ಅನುವಾದ ಸಾಹಿತ್ಯವೆನ್ನಬಹುದು. ನೇರವಾದ ಅನುವಾದವಲ್ಲದಿದ್ದರೂ ಅವುಗಳ ಭಾವಾರ್ಥವೇ ಅನುಭವಕೃತಿಗಳಾಗಿ ರಚಿತವಾಗಿವೆ. "ಪರಮಾನುಭವ ಬೋಧೆಯು" ಮಹರ್ಷಿ ಯಾಜ್ಞವಲ್ಕ್ಯರು ತಮ್ಮ ಪತ್ನಿ ಮೈತ್ರೇಯಿಗೆ ನೀಡಿದ ಅದ್ವೈತ ತತ್ತ್ವೋಪದೇಶದ ಸಂಸ್ಕೃತ ಗ್ರಂಥದ ಭಾವಪ್ರಕಾಶಿಕೆಯಾಗಿದೆ. ಶ್ರೀರಾಮಚಂದ್ರನಿಗೆ ವಾಸಿಷ್ಠರು ನೀಡಿದ ಉಪದೇಶಗಳ ಯೋಗವಾಸಿಷ್ಠ ಗ್ರಂಥದ ಭಾವಪ್ರದೀಪವೇ "ಪರಮಾರ್ಥ ಗೀತೆಯಾಗಿ" ಕನ್ನಡದಲ್ಲಿ ಪಲ್ಲವಿಸಿದೆ. ಅದ್ವೈತ ತತ್ತ್ವವನ್ನು ಕನ್ನಡದಲ್ಲಿ ಸುಂದರವಾಗಿ ಚಿತ್ರಿಸಿದ ಕನ್ನಡದ ಮಹರ್ಷಿಗಳು ನಿಜಗುಣ ಶಿವಯೋಗಿಗಳು. ಶಾಸ್ತ್ರಜ್ಞಾನ ಪಂಡಿತರಾಗಿದ್ದ ಮಾತ್ರಕ್ಕೆ ಅವರು ಆ ತತ್ತ್ವದ ಅನುಯಾಯಿಗಳೆಂದು ಹೇಳುವ ಮಾತು ಸಲ್ಲದೆಂದು ವಿಮರ್ಶಕರು ಹೇಳಿದ್ದಾರೆ—

ಶ್ರೀಗುರುವೆ ಶರಣು ಶಿವಯೋಗಸಂಪದವನಿನ ।
ಸಾಗುಮಾಡಿದ ನಿಜವಿರಾಗಿ ಜನವಂದ್ಯ ॥ಪ॥
ಘೋರಗಾಢಟಾದಿ ವಿಷಯವನು ಫಲರೂಪದಿಂ ।
ದರಿವುತಾಶ್ರೈಸಿದ ಚಿದಾಭಾಸದ ॥
ಕುರುಹುವಿಡಿದಂತಲ್ಲಿ ಸತ್ಯಸಂವಿತ್ತೆನಿಸಿ ।
ಮೆರೆವ ಪರತತ್ತ್ವವದು ನೀನೆಂದು ಪೇಳ್ದ ॥೧॥

ಭೇದಾಪರೋಕ್ಷವೆಂಬಿರಡುಪಾಧಿಯುಸುಳಿದು ।
ವಾದಿಸದಖಂಡೈಕರಸರೂಪೆನಿಸಿದ ॥
ಬೋಧಾಂಬುನಿಧಿ ಶಂಭುಲಿಂಗವಾಗಿಹಮುಕ್ತಿ ।
ಯಾದಪರಿ ನಿನಗಿದೆಂದೊಲಿದರುಹಿದ ॥೩॥

ಎಂದು ಹಾಡಿರುವ ಕೈವಲ್ಯಪದ್ಧತಿಯ ಈ ಪದ್ಯದಿಂದ ಅವರು ಶಿವಯೋಗಿಗಳೂ ಶಿವಾದ್ವೈತತತ್ತ್ವದ ಅನುಯಾಯಿಗಳೂ ಎಂಬುದರ ಅರಿವು ನಮಗಾಗುತ್ತದೆ.

ಮಾನವಜೀವನದ ಪರಮಗುರಿಯಾದ ಮೋಕ್ಷಗತಿಯನ್ನು ವಿವರಿಸುತ್ತಾ—

“ಬೆರಸಿ ಬೇರೆನಿಸದೆರಡಾಲಿಕಲ್ಲುಗಳೇಕ ।
ಸುರಸವಾದಂತೆ ಪತಿ ಶಂಭುಲಿಂಗ ।
ಶರಣ ಸತಿಯುಕೂಡಿ ಪರತರಾನಂದದೊಳು ।
ಪರವಶವನೈದಿಹುದನುಪಮಿಸಲುಬಹುದೆ ॥”

ಎಂದು ಲಿಂಗಾಂಗ ಸಾಮರಸ್ಯವನ್ನೂ ಶರಣಸತಿ ಲಿಂಗಪತಿ ಭಾವವನ್ನೂ ಬಿತ್ತರಿಸಿದ್ದಾರೆ. ಆಧ್ಯಾತ್ಮದೃಷ್ಟಿಯಿಂದ ಅವರ ಆತ್ಮಶ್ರೀ ಸಂಪತ್ತನ್ನು ಈ ಪದ್ಯದಲ್ಲಿ ನಿರೂಪಿಸಿದ್ದಾರೆ.

ಆವಪುಣ್ಯದಫಲವೊ ಲಿಂಗಪೂಜಾ ।
ವಿಧಿಯನುಭಾವಮಯವು ನರಜನ್ಮದೊಳು ॥
ಸಾವಿರಮುಖದೊಳರಸಿ ನೋಡಿ ।
ನಿಗಮಾವಳಿಗೌಣದಸಾಧ್ಯವಿದು ॥ಪ॥
ಮೊದಲು ಲಿಂಗದ ಕಳೆಯನನುಭವಿಸುವರತಿ ।
ಹೃದಯದೊಡಗೂಡಿ ನೆನೆವರತಿ ॥
ಸದಮಳಲೋಚನದೊಳು ನಿಟ್ಟಿಸುವರತಿ ।
ಯೊದವಿ ಕರದೊಳಿಂಬಿಡುವರತಿ ॥೧॥

..........................................

ಲಿಂಗವೆ ಪುಷ್ಪಾಂಜಲಿಗೈಯುವತಿಸುಖ ।
ಸಿಂಗರವೆನಿಸಿ ಬಣ್ಣಿಸುವ ಸುಖ ॥
ಮಂಗಳಮಯ ಶಂಭುವೆನಿಸಿ ರಾಜಿಪ ಸುಖ ॥
ಲಿಂಗಪೂಜಾಸಂಭ್ರಮದ ಸುಖ ॥

ಎಂದು ಲಿಂಗಪೂಜೆಯ ವಿಧಿವಿಧಾನವನ್ನು ಅದರ ಆನಂದಾನುಭವವನ್ನೂ ಅತ್ಯಂತ ಮನೋಜ್ಞವಾಗಿ ವಿವರಿಸಿದ್ದಾರೆ. ಅವರು ಶಿವತತ್ತ್ವಾನುಸಂಧಾನನಿರತರು. ಶಿವಯೋಗಸಂಪನ್ನರು ಮತ್ತು ಶಿವಾದ್ವೈತಿಗಳೆನ್ನುವುದಕ್ಕೆ ಇಂತಹ ಹಲವಾರು ಸಿರಿಸಂಪತ್ತುಗಳು ಅವರ ಕೃತಿಗಳಲ್ಲಿ ಮೂಡಿಬಂದಿವೆ. ಆದುದರಿಂದ ಅವರು ಶಿವಯೋಗಿಗಳಾದ ಶಿವಾದ್ವೈತಿಗಳೆನ್ನುವುದೇ ಸಮಂಜಸವಾಗಿದೆ.

## ಯೋಗಸಂಪತ್ತು

ನಿಜಗುಣರು ಶಿವಯೋಗಿಗಳು. ಅಂದಮೇಲೆ ಅವರು ಯಾವುದೇ ಒಂದು ಯೋಗವನ್ನು ಹಿರಿದೆಂದು ಹೇಳಿ ಮತ್ತೊಂದನ್ನು ಹಳಿಯುವುದಿಲ್ಲ. ಆದುದರಿಂದ ಯೋಗತತ್ತ್ವ ಸಮನ್ವಯಾಚಾರ್ಯರೆನಿಸಿದ್ದಾರೆ. ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳ ಬಾಹ್ಯಾನುಭವ ವಿಚಾರಧಾರೆಯನ್ನು ಹರಿಸಿದ್ದಾರೆ. ರಾಜಯೋಗ, ಹಠಯೋಗ, ಲಯಯೋಗ, ಮಂತ್ರಯೋಗ, ಶಿವಯೋಗದ ಅಂತರಾರ್ಥ ವಿಚಾರವಾಹಿನಿಯನ್ನು ಪ್ರವಹಿಸಿದ್ದಾರೆ.

"ನೋಡಿ ಬಲ್ಲವರು ಸುಖಭೋಗದಳಿಯಾಸೆಯೊಡ ।
ಗೂಡಿ ಕೆಡದಿರೆ ಭಾಗ್ಯವಿಲ್ಲದಾಗದು ಬಿಡದೆ ।

ಮಾಡಿಯುವರಿಂದೆ ಶಿವಧರ್ಮರತಿಯುಸೆ ।
ಬೇರೆ ಬೇಡಬಹುಕೋಟಲೆಗಳು ॥

..................................

ಮುಪವಲರಿ ಶಂಭುಲಿಂಗದ ಪಾದಪಂಕಜವ ।
ನೊದವಿಸಲೆ ಕಾಮ ವರನಿಷ್ಕಾಮವೆಂಬುಭಯುವ ।
ವಿಧಿವಿಡಿದು ಭಜಿಸೆ ಬಾಹ್ಯಾ ।
ಭ್ಯಂತರದೊಳು ಪರಮಾನಂದಸಿದ್ಧಿಯುಹುದು ॥

ಎಂದು ನಿಷ್ಕಾಮ ಕರ್ಮಯೋಗಸಿದ್ಧಾಂತವನ್ನು ಬೋಧಿಸುತ್ತಾ "ಗುರುಶಂಭುಲಿಂಗದ ಶ್ರೀಪಾದವನು ನೆನೆಸುಖವಹುದು" ಎಂದಿದ್ದಾರೆ. ಮಾನವ ತನ್ನ ಗುರಿಯನ್ನು ಮುಟ್ಟಲು ದೃಢ ನಿಶ್ಚಿತನಾಗಿ ತನ್ನ ಸಾಧನೆಯನ್ನು ಮುಂದುವರಿಸಬೇಕು. ದೇವನನ್ನು ನಂಬಿ ಕಾರ್ಯನಿಷ್ಠನಾಗಿ ನಡೆಯಬೇಕು ಎಂದು ಬೋಧಿಸಿದರು. ಜೀವನವೆಲ್ಲಾ ಕರ್ಮಯೋಗಿಯೇ ಆಗಿರಬೇಕೆಂದರ್ಥವಲ್ಲ. ಅರ್ಥವಿಲ್ಲದ ಕರ್ಮ ನಿರರ್ಥಕ ಕರ್ಮ. ಕರ್ಮಫಲಾಪೇಕ್ಷೆಯಿಲ್ಲದೆ ಮಾಡಿದವರಿಗೆ ಸತ್ಫಲವನ್ನು ನೀಡುವ ಸಾಮರ್ಥ್ಯವನ್ನು ಹೊಂದಿರಬೇಕು; ಅಂದರೆ ಅದು ಜ್ಞಾನಪೋಷಿತವಾಗಿರಬೇಕು. ಜ್ಞಾನಮಯವಾಗಿರಬೇಕು ಎನ್ನುತ್ತಾರೆ—

ತೋರದಯ್ಯೋ ಸುಖ ತೋರದಯ್ಯೋ ।
ಬೇರೆ ಬೇರೆ ಭಾವಿಸಿ ಬ್ರಹ್ಮಜ್ಞಾನವೊಂದಿಲ್ಲದವಗೆ ॥
ನಿಗಮಾಗಮವನೋದಿ ಸುಗುಣಸಂತತಿಗೂಡಿ ।
ಜಗದೊಳವಾಂತು ತನ್ನ ಬಗೆಯ ನಾರೈಯುದಿರೆ ॥೧॥
ಕಪಟವಳಿದು ಕೋಟಿ ಜಪವನೆಸಗಿ ಬಲು ।
ತಪವನೆಮಾಡಿ ತತ್ವದುಪದೇಶವಡೆಯುವೆ ॥೨॥

ಹಿಂಗದಣಿಮಾದಿ ಸಿದ್ಧಿಯುಂಗವಾಗಿ ಪೇರ್ವ ಲೋಕ ।
ದಂಗುರವೆನಿಸಿ ಶಂಭುಲಿಂಗದನುವರಿಯುದೆ ॥

ಎಂದು ಶಿವಜ್ಞಾನಾಶ್ರಯದಿಂದಾಗುವ ಸುಖವನ್ನು ಪ್ರಸ್ತಾಪಿಸುತ್ತಾರೆ. ಈ ಗೀತೆಯಲ್ಲಿ ಜ್ಞಾನಯೋಗಪ್ರತಿಪಾದನೆ ಮಾತ್ರವೇ ಅಲ್ಲ, ಭಕ್ತಿಯೋಗಾವಲಂಬನತ್ವವನ್ನು ಸೂಚಿಸಿದ್ದಾರೆ. ಆದರೆ ಅವರು ಭಕ್ತಿಭಾವದಲ್ಲಿ ಮೈಮರೆತು ನಿಜಾನಂದವನ್ನು ಅನುಭವಿಸಿದವರು. ಭಕ್ತಿಯ ಭರದಲ್ಲಿ ಬರುವ ಸಿರಿ ಮತ್ತಾವ ಮಾರ್ಗದಲ್ಲಿ ಸಿಗುತ್ತದೆ? ಎನ್ನುತ್ತಾರೆ.

"ನಾದಪ್ರಿಯ ಶಿವನೆಂಬರು—ನಾದಪ್ರಿಯ ಶಿವನಲ್ಲವಯ್ಯಾ ;
ವೇದಪ್ರಿಯ ಶಿವನೆಂಬರು—ವೇದಪ್ರಿಯ ಶಿವನಲ್ಲವಯ್ಯಾ ;
ನಾದವ ಮಾಡಿದ ರಾವಣಂಗೆ ಅರೆ ಆಯುಷ್ಯವಾಯಿತ್ತು,
ವೇದವನೋದಿದ ಬ್ರಹ್ಮನ ಶಿರಹೋಯಿತ್ತು!
ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ ;
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ"

ಎಂದು ಬಸವಣ್ಣನವರೇ ಪರಮಾತ್ಮನು ಭಕ್ತಿಪ್ರಿಯನೆಂದೂ, ಭಕ್ತಿಗೆ ಒಲಿಯುವವನೆಂದೂ ಹೇಳಿಕೊಂಡಿದ್ದಾರೆ. ನಿಜಗುಣರು ತಮ್ಮ ಜೀವನದಲ್ಲಿ ಭಕ್ತಿಸಂಪತ್ತನ್ನು ಅತ್ಯಧಿಕವಾಗಿ ಬೆಳೆಸಿಕೊಂಡಿದ್ದವರು. ಜನ್ಮಾಂತರಗಳವರೆಗೆ ಭಕ್ತಿಮಾರ್ಗವನ್ನೇ ಪ್ರಾರ್ಥಿಸಿದ್ದಾರೆ—

ಕರುಣಿಸೆನಗಿದನೆ ಬೇಡುವೆನಭವ ಬೇರೊಂದು
ಪರುಷನೊಲ್ಲೆನು ಮುಕ್ತಿದೊರೆವ ಸಾಧನವ ॥ಪ॥
ಆವಕಾಲದೊಳು ಬಳಿಕಾವದೇಶದೊಳು ಬೇ
ರಾವವಸ್ತುವಿನೊಳೊಡೆವೆರೆಯದಲೆ ಮಮತೆ
ಆವಪರಿಯೊಳು ತನ್ನ ಮೇಲಿರ್ಪುದಂತೆ ಗುರು

ದೇವತೆಯೊಳು ತನ್ನ ಮೋಲಿರ್ಪುದಂತೆ ಗುರು
ದೇವತೆಯೊಳನುರಾಗವಿಹುದೆ ನಿಜಭಕ್ತಿ ॥೧॥

ಎನ್ನುತ್ತಾ ಭಕ್ತಿವೈಭವವನ್ನು ಸಾರಿದ್ದಾರೆ. "ಬೇಡುವೆನಭವ" ನಿಮ್ಮನು ಭವಭವದೊಳು।............ಕಂತುಹರ ಶಂಭುಲಿಂಗ ನಿಮ್ಮಡಿಯ ಭಕ್ತಿಯನು" ಎಂದು ಅನಂತಜನ್ಮಗಳಿಗೂ ಭಕ್ತಿ ಸಂಪತ್ತನ್ನೇ ಪ್ರಾರ್ಥಿಸಿದ್ದಾರೆ. ಅಂತೆಯೇ ಅವರ ಕೃತಿಗಳಲ್ಲಿ ಭಕ್ತಿಗೀತೆಯ ಸಂಪತ್ತು ತುಂಬಿದೆ. ಅವರ ಹೃದಯ ಭಕ್ತಿ ಸಂಪತ್ತಿನಿಂದಲೇ ತುಂಬಿ ಅವರು ಮಹಾಭಕ್ತಯೋಗಿಯೆನಿಸಿದ್ದಾರೆ. ಅವರು ಮಾತ್ರವೇ ಭಕ್ತಾಗ್ರಣಿಗಳೆನಿಸದೆ ಭಕ್ತ್ಯಾಧಿಕ್ಯದ ಅಮೃತಧಾರೆಯನ್ನು ಕನ್ನಡನಾಡಿನಲ್ಲಿ ಹರಿಸಿ ಶುಷ್ಕಹೃದಯವನ್ನು ತಣಿಸಿದ್ದಾರೆ.

## ಸಂಗೀತ ಸಂಪತ್ತು

ಕನ್ನಡ ಸಾರಸ್ವತ ಪ್ರಪಂಚದಲ್ಲಿ ಗೀತವಾಹಿನಿಯು ಪ್ರವಹಿಸಿರುವುದು ಒಂದು ಭಾಗ್ಯವಿಶೇಷ. ಅವರ ಕೈವಲ್ಯಪದ್ಧತಿಯು ಶಾಸ್ತ್ರೀಯ ಸಂಗೀತಗ್ರಂಥವೇ ಆಗಿದೆ. ಆದರೆ ಅವರಿಗಿಂತಲೂ ಮುಂಚೆಯೇ ಅಂದರೆ ಸುಮಾರು ೧೩ ಮತ್ತು ೧೪ನೇ ಶತಮಾನದಲ್ಲೇ ದಾಸಪಂಥದಲ್ಲಿ ಗಾನವಾಹಿನಿಯು ಹರಿದುಬಂದಿದೆಯೆಂದು ವಿಚಾರಮಾಡಿದ್ದಾರೆ. ಆದರೆ ಅವರಿಗಿಂತಲೂ ಹಿಂದೆಯೇ ಅಂದರೆ ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ಹಾಡುಗಬ್ಬಗಳನ್ನು ರಚಿಸಿ ಸಂಗೀತಕ್ಕೆ ಅಳವಡಿಸಿರುವುದು ಕಂಡುಬರುತ್ತದೆ.[1] ಆದರೆ ದಾಸಪಂಥದ ಗ್ರಂಥಗಳಲ್ಲಿ ನೈತಿಕ ವಿಷಯಗಳನ್ನೇ

---

[1] ಡಾ. ಎಲ್. ಬಸವರಾಜುರವರಿಂದ ಸಂಪಾದಿತ "ಶಿವದಾಸ ಗೀತಾಂಜಲಿ" ನೋಡಿ.

ಪ್ರಧಾನವಾಗಿಟ್ಟುಕೊಂಡು ಸಾಮಾಜಿಕ ವಿಷಯಗಳ ವಿವೇಚನೆ ಮಾಡಿದ್ದಾರೆ. ಶ್ರೀಮನ್ನಿಜಗುಣ ಶಿವಯೋಗಿಗಳ ಕೃತಿಗಳಲ್ಲಿ ಆಧ್ಯಾತ್ಮಿಕ ವಿಷಯಗಳ ಶಾಸ್ತ್ರಬದ್ಧ, ತರ್ಕಯುಕ್ತ ಅನುಭವ ಯೋಗ್ಯವಿವೇಚನೆ ನಡೆದಿದೆ. ಇಂತಹ ಪ್ರಬುದ್ಧ ವಿಷಯವನ್ನು ತಾಳ-ಲಯಬದ್ಧವಾಗಿ ಶಾಸ್ತ್ರೀಯ ಸಂಗೀತಕ್ಕೆ ಅಳವಡಿಸಿರುವುದು ಅಭಿನಂದನಾರ್ಹ ಸಂಗತಿಯಾಗಿದೆ. ಅವರ ಕೈವಲ್ಯಪದ್ಧತಿಯಲ್ಲಿ ನಾದನಾಮಕ್ರಿಯೆ, ಶಂಕರಾಭರಣ, ಧನ್ಯಾಸಿ, ದೇಸಿರಾಗ ಮುಂತಾದ ಜನಜನಿತ ರಾಗಗಳಿಂದ ಹಿಡಿದು, ಅಹರಿ, ಪಹಡಿ, ಸೌರಾಷ್ಟ್ರ, ಮಾಳವ, ಕಾಂಭೋದಿ, ಲಲಿತ, ಸಾರಗ, ಸುವ್ವಾಲೆ ವರ್ಣ, ಮುಂತಾದ ಅಪರೂಪ ರಾಗಗಳಲ್ಲೂ ಪ್ರವಹಿಸಿ ವಿದ್ವಜ್ಜನ ಪ್ರಿಯವಾದ ಭೈರವಿ, ತೋಡಿ, ಕುರಂಜಿ, ಸಾಳಂಗ, ಶ್ರೀರಾಗ, ವಸರಿತ, ಫಾರಶಿ, ಮಾಧ್ಯಮಾವತಿ, ಭೌಳಿ, ನಾಟ, ಕಲ್ಯಾಣಿ, ಮತ್ತು ಭೂಪಾಳಿ ಮೊದಲಾದ ರಾಗಗಳಲ್ಲಿ ಗೀತೆಗಳನ್ನು ರಚಿಸಿ ರಂಜನೆಗೈದಿದ್ದಾರೆ. ಕೈವಲ್ಯಪದ್ಧತಿಯ ಆರಂಭ ಪದ್ಯವೇ ನಾದ ನಾಮಕ್ರಿಯೆ ರಾಗದಿಂದ ಆರಂಭವಾಗುತ್ತದೆ. ಸಂಗೀತವನ್ನು ಮನೋವಿಲಾಸಕ್ಕೆ ಮಾತ್ರ ಮೀಸಲಾದ ಕಲೆಯೆಂದು ಅವರು ಭಾವಿಸಿರಲಿಲ್ಲ. ಅದು ಆತ್ಮವಿಕಾಸದ ಅತ್ಯುನ್ನತ ಮಾರ್ಗವೆಂದು ಭಾವಿಸಿದ್ದರು. ಆದುದರಿಂದ ಕಲೆಯನ್ನು ಶಿವನೊಲುಮೆಯ ಸಂಪತ್ತಾಗಿ ಬೆಳೆಸಿಕೊಂಡಿದ್ದಾರೆ. "............ವರಶಂಕರಾ ಭರಣವನು ಮೇಳೈಸಿ ಯೋಗ। ಕರಣವೆಂಬಂಗುಲಿಯನಿಟ್ಟು ಬಾಜಿಸಿ॥ ವರನಾದವೆಂಬ ಗೀತವನು ಗುರುಶಂಭುಲಿಂಗವರಿದೆಂದು ಮೆಚ್ಚಿ ಮುಕ್ತಿಪದವೀಯೆ ಕೇಳಿಸುವ............" ಎಂದು ಶಂಕರಾಭರಣ ರಾಗವನ್ನು ಶಿವಯೋಗಸಾಧನೆಯಲ್ಲಿ ಬಳಸಿಕೊಳ್ಳುವ ಸಂದೇಶವನ್ನೇ ನಮ್ಮ ಮುಂದಿಟ್ಟಿದ್ದಾರೆ. ಹೀಗೆ

ಅವರ ಹಾಡುಗಳಲ್ಲಿ ಆಧ್ಯಾತ್ಮದ ದಿವ್ಯಕಾಂತಿಯು ಹೊರಹೊಮ್ಮಿ ಸಂಗೀತವು ಶಿವಸಾಕ್ಷಾತ್ಕಾರದ ಸಾಧನಸಂಪತ್ತಾಗಿರುವಂತೆ ಮಾಡಿದ್ದಾರೆ.

## ಕಾವ್ಯಶ್ರೀ

ನಿಜಗುಣರು ಶಿವಯೋಗಿಗಳು ಮಾತ್ರವೇ ಅಲ್ಲ. ಅವರು ವರಕವಿಗಳೂ ಆಗಿದ್ದಾರೆ. ಅವರ ಕೃತಿಗಳಲ್ಲಿ ಆಧ್ಯಾತ್ಮ, ಧರ್ಮ ತತ್ತ್ವಗಳೇ ಅಂತರಗಂಗೆಯಾಗಿ, ಗುಪ್ತಗಾಮಿನಿಯಾಗಿ ಪ್ರವಹಿಸಿದ್ದರೂ ಸಹ ನವರಸದ ಔತಣವನ್ನೇ ಮಾಡಿಟ್ಟಿದ್ದಾರೆ. ಯೋಗ, ಭಕ್ತಿ, ಕರ್ಮ, ಜ್ಞಾನ ಮುಂತಾದುವುಗಳನ್ನೇ ಪ್ರತಿಪಾದಿಸುವುದಕ್ಕಾಗಿ ಹಲವಾರು ಕೃತಿಗಳು ರಚನೆಯಾಗಿವೆ. ಆದರೆ ಇದೇ ಉದ್ದೇಶವನ್ನೇ ಅನ್ಯರಸದಿಂದಲೂ ಪ್ರಚೋದಿಸುವುದು ಸಾಧ್ಯವೆನ್ನುವುದನ್ನು ಹಲಕೆಲವು ಗೀತೆಗಳಲ್ಲಿ ತೋರಿದ್ದಾರೆ—

ಸೋಲದಾತನೆ ವಿರತನು ಮನದೊಳಗೆ ।
ಬಾಲೆಯರ ಸಿಂಗರವನೇ ಕಂಡು ॥ಪ॥
ತಳಿರಡಿಯನುಣ್ದೊಡೆಗಳ ।
ಚೆಲುವಿನೊಬ್ಬುಳಿಯುಹ ನಿತಂಬ ಭರದ । ನಡಿಗೆ ॥
ಬಳಕುವತಿ ಬಡನಡುವಿನ । ತೆಳುವಸುರ ।
ನಳಿತೋಳನಲ್ಲಳನುವ ಕಂಡು ॥೧॥
ನಸುದೋರ್ಪ ಬಲ್ಮೊಲೆಗಳ ಲಾವಣ್ಯ ।
ರಸವೊಸರ್ವ ಮುದ್ದುಮೊಗದ ಕಾಂತಿ ॥
ಪಸರಿಸುವ ನಿಡುಗಂಗಳ । ಜವ್ವನದ ।
ಮಿಸುನಿವಣ್ಣದ ಮೈಯ್ಯಳ ಕಂಡು ॥೨॥

..............................
ಮನವನಳ್ಳರಿವುದೊಂದು ।
ಭಯವಿಲ್ಲದನುಕೂಲನಿರೆ ತನ್ನ । ನೆಳಸಿ
ವಿನಯವಾಂತಿರಲಳುಪದೆ ।
ನಿಜಧೈರ್ಯವನ್ನೆ ಶಂಭುಲಿಂಗದಿಂದ ಪಡೆದು ॥೫॥

ಎಂಬ ಈ ಪದ್ಯದಲ್ಲಿ ಶೃಂಗಾರರಸ ಪ್ರಧಾನವಾಗಿಟ್ಟುಕೊಂಡು ವೈರಾಗ್ಯ ಸಾಧನೆಯ ದರ್ಶನವನ್ನು ನಮ್ಮ ಮುಂದಿಟ್ಟಿದ್ದಾರೆ.

ನಿಜಗುಣರ ಶೈಲಿ ಮನೋಜ್ಞವಾದುದು. ಅಲ್ಲಿ ಲಾಲಿತ್ಯವಿದೆ, ಮಾಧುರ್ಯವಿದೆ, ಕಾಂತಿಯೂ ತುಂಬಿದೆ. ಭಾಷಾಶಾಸ್ತ್ರಕ್ಕೆ ಅನ್ವಯಿಸುವಂತೆ ಛಂದಸ್ಸು ಪ್ರಾಸಾದಿಗಳ ನಿಯಮವನ್ನು ಎಡೆ ಬಿಡದಂತೆ ಕಾಯ್ದುಕೊಂಡಿದ್ದಾರೆ. ಹೀಗೆ ಅವರ ಕಾವ್ಯಗಳಲ್ಲಿ ಭಾವಸಂಪತ್ತಿದೆ, ನಾದಸಂಪತ್ತಿದೆ, ಭಾಷಾಸಂಪತ್ತೂ ಇದೆ. ಆದುದರಿಂದಲೇ ನಿಜಗುಣರು ಈ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಶ್ರೇಷ್ಠ ಸ್ಥಾನವನ್ನು ಪಡೆದಿದ್ದಾರೆ. ಕನ್ನಡಿಗರ ಆತ್ಮಶ್ರೀಯೆನಿಸಿದ್ದಾರೆ. ನಿಜಗುಣರ ನಂತರ ಕನ್ನಡ ಸಾಹಿತ್ಯಕ್ಕೆ ಇಂತಹ ಭವ್ಯ ಪರಂಪರೆಯನ್ನು ಬೆಳೆಸುವವರಿಲ್ಲವಾಯಿತೆನ್ನಬೇಕು. ಜಗತ್ತಿನಲ್ಲಿ ಎಷ್ಟೋ ನವ್ಯದರ್ಶನಗಳು ಉದಯಿಸಿವೆ. ಪ್ರಾಚೀನ ದರ್ಶನಗಳನ್ನು ನೋಡುವ ದೃಷ್ಟಿಯಲ್ಲಿ ಪರಿವರ್ತನೆಯಾಗಿದೆ. ಇರುವ ವಿಷಯವನ್ನು ಅರುಹುವ ರೀತಿ ಬೇರೆಯಾಗಿದೆ. ಆದುದರಿಂದ ನವಯುಗಕ್ಕನುಸರಿಸಿ ನಿಜಗುಣರ ಆತ್ಮಶ್ರೀ ಬೆಳಗುವುದು ಕನ್ನಡ ನಾಡಿಗೆ ಕೀರ್ತಿ ತರುವ ಸಂಗತಿಯಾಗುತ್ತದೆ. ಆದುದರಿಂದ ನಿಜಗುಣರ ಕಾವ್ಯಗಳನ್ನು ಯಾವ ದೃಷ್ಟಿಯಿಂದ ವಿಚಾರ ಮಾಡಿದರೂ ಆಯಾ ದೃಷ್ಟಿಯಲ್ಲಿ ಅವು ಅಮೋಘ ಸಂಪತ್ತಿನ ಕೊಡುಗೆಯಾಗಿ ನಮಗೆ ಲಭ್ಯವಾಗಿವೆ.

## ೬. ಕೃತಿಸಾರಧಾರಾ

ನಿಜಗುಣರ ವ್ಯಕ್ತಿತ್ವವನ್ನು ಅರಿಯಲು ಅವರ ಕೃತಿಗಳೇ ನಮಗೆ ಸಹಕಾರಿಗಳು. ತಮ್ಮ ಅಮರ ಕೃತಿಗಳಿಂದಲೇ ಅವರು ಕನ್ನಡನಾಡಿನ ಅಮರಜ್ಯೋತಿಯಾಗಿ ಬೆಳಗುತ್ತಿದ್ದಾರೆ. ಅವರು ಕೃತಿರಚನೆ ಮಾಡಿದ್ದು ಕನ್ನಡದಲ್ಲಿ. ಸಂಸ್ಕೃತದಲ್ಲಿ ಅವರಿಗೆ ಅದ್ವಿತೀಯ ಪಾಂಡಿತ್ಯವಿದ್ದಿತೆಂಬುದು ಅವರ ಗ್ರಂಥಗಳನ್ನು ಓದಿದವರಿಗೆ ಸಹಜವಾಗಿಯೇ ಗೊತ್ತಾಗುತ್ತದೆ. ಅವರು ಹಾಡುಗಳು, ಸಾಂಗತ್ಯ, ತ್ರಿಪದಿ, ರಗಳೆ ಮತ್ತು ಗದ್ಯಶೈಲಿಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಹಾಡುಗಳಿಂದ ಕೂಡಿದ ಕೃತಿಗಳು ಗೀತಕಾವ್ಯಗಳಾಗಿವೆ. ಮಧುರ ಶಬ್ದಸಮುದಾಯದಿಂದಲೂ ಮನೋಹರವಾದ ಶಬ್ದಾಲಂಕಾರ ಅರ್ಥಾಲಂಕಾರ ಮಂಜುಳ ರಸಭಾವಗಳಿಂದ ಕೂಡಿ ಸಾಹಿತ್ಯದ ರಸದೌತಣವನ್ನು ಕನ್ನಡಿಗರಿಗೆ ನೀಡಿದ್ದಾರೆ. ಅವರು ರಚಿಸಿದ ಕೃತಿಗಳಲ್ಲಿ ಏಳುಮಾತ್ರ ಲಭ್ಯವಾಗಿವೆ. ಅವು ಯಾವುವೆಂದರೆ—

(೧) ಅರವತ್ತುಮೂರರ ತ್ರಿವಿಧಿ, (೨) ಕೈವಲ್ಯಪದ್ಧತಿ, (೩) ಪರಮಾರ್ಥಪ್ರಕಾಶಿಕೆ, (೪) ಅನುಭವಸಾರ, (೫) ಪರಮಾನುಭವ ಬೋಧೆ, (೬) ಪರಮಾರ್ಥಗೀತೆ, (೭) ವಿವೇಕ ಚಿಂತಾಮಣಿ. ಇವೂ ಅಲ್ಲದೆ ಸಂಸ್ಕೃತದಲ್ಲಿ (೧) ದರ್ಶನಸಾರಂ ಮತ್ತು (೨) ಆತ್ಮತರ್ಕ ಚಿಂತಾಮಣಿ ಎಂಬ ಎರಡು ಗ್ರಂಥಗಳನ್ನು ಬರೆದಿರುವರೆಂದು ಪ್ರತೀತಿ. ಆದರೆ ಅವು ಲಭ್ಯವಾಗಿಲ್ಲ.

### ಅರವತ್ತುಮೂವರ ತ್ರಿವಿಧಿ

ಮೇಲಿನ ಎಲ್ಲಾ ಗ್ರಂಥಗಳಲ್ಲಿಯೂ ಅರವತ್ತುಮೂವರು ಪುರಾತನರ ತ್ರಿವಿಧಿ ಅತ್ಯಂತ ಚಿಕ್ಕ ಕೃತಿ. ಶೈವಧರ್ಮಾಭಿಮಾನಿ

ಗಳಿಗೆ ಅರವತ್ತುಮೂವರು ಪುರಾತನರಲ್ಲಿ ಅಪಾರ ಭಕ್ತಿ. ಅವರು ಭಕ್ತಿಸಂಥಾನುಯಾಯಿಗಳಾಗಿ ವಿವಿಧ ರೀತಿಯಲ್ಲಿ ತಮ್ಮ ಭಕ್ತಿ ಪ್ರಭಾಪುಂಜದಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡ ರೆಂದು ಅವರ ಕಥೆಯು ಚಿತ್ರಿತವಾಗಿದೆ. ದಕ್ಷಿಣಭಾರತದ ಶೈವ ಕವಿಗಳು ಅರವತ್ತುಮೂರುಜನ ಪುರಾತನರನ್ನು ಪ್ರಾರ್ಥಿಸಿರು ವುದೂ ಮತ್ತು ಶಿವಾಲಯಗಳಲ್ಲಿ ಅವರ ಚಿತ್ರಗಳು ಶಿಲ್ಪ ಮೂರ್ತಿಗಳೂ ಇರುವುದು ಇದಕ್ಕೆ ತಕ್ಕ ನಿದರ್ಶನವಾಗಿದೆ. ಮೈಸೂರು ಜಿಲ್ಲೆ ನಂಜನಗೂಡಿನ ಶ್ರೀ ನಂಜುಂಡೇಶ್ವರ ದೇವಾ ಲಯ ಮತ್ತು ಚಾಮರಾಜನಗರದ ಶ್ರೀ ಚಾಮರಾಜೇಶ್ವರ ದೇವಾಲಯದಲ್ಲಿಯೂ ಸಹ ಪುರಾತನರ ವಿಗ್ರಹಗಳಿವೆ. ಈ ಪುರಾತನರೆಲ್ಲಾ ಕುಲಸೀಮೆಗಳನ್ನು ಮೀರಿದವರು. ಇವರಲ್ಲಿ ಭಿನ್ನ ಜಾತಿಯಲ್ಲಿ ಜನಿಸಿದವರೂ ೩೨ ಮಂದಿ ಶಿವಲಿಂಗದ ಉಪಾಸನೆಯಿಂದಲೂ, ೧೨ ಮಂದಿ ಗುರುಕೃಪೆಯಿಂದಲೂ ೧೯ ಮಂದಿ ಶಿವಭಕ್ತರ ಅನುಗ್ರಹದಿಂದಲೂ ಮುಕ್ತಿ ಪಡೆದರೆಂದು ಕಥೆಗಳಲ್ಲಿ ಹೇಳಿದೆ. ಇವರಲ್ಲಿ ಇಬ್ಬರು ಸ್ತ್ರೀಯರು, ೧೮ ಮಂದಿ ಬ್ರಾಹ್ಮಣರು, ೧೨ ಮಂದಿ ಕ್ಷತ್ರಿಯರು, ೫ ಮಂದಿ ವೈಶ್ಯರು. ಒಬ್ಬರು ಹರಿಜನರು, ೨೪ ಮಂದಿ ಇತರ ಶೂದ್ರವರ್ಗಕ್ಕೆ ಸೇರಿ ದವರು. ಇವರೆಲ್ಲರೂ ತಮಿಳುನಾಡಿನ ವಿವಿಧ ಕ್ಷೇತ್ರಗಳಲ್ಲಿ ಜನಿಸಿ ಬೆಳೆದವರು. ಇವರೆಲ್ಲರೂ ಒಂಬತ್ತನೆಯ ಶತಮಾನಕ್ಕೆ ಹಿಂದೆ ಜೀವಿಸಿದ್ದವರೆಂದು ಇತಿಹಾಸಜ್ಞರು ಹೇಳುತ್ತಾರೆ.

ಇವರು ತಮಿಳುನಾಡಿನ ಮಹಾಪುರುಷರಾದ್ದರಿಂದ ಇವರ ಚರಿತ್ರೆಯು ಮೊದಲು ರಚಿತವಾದದ್ದು ತಮಿಳಿನಲ್ಲಿ. ಒಂಬತ್ತನೆ ಶತಮಾನದಲ್ಲಿದ್ದ ಚಿದಂಬರ ಕ್ಷೇತ್ರದ 'ಶೇಕ್ಕಿರಾರ್' ಎಂಬುವರು 'ಪೆರಿಯ ಪುರಾಣ'ವೆಂಬ ಬೃಹತ್ ಕಾವ್ಯವನ್ನು ತಮಿಳಿನಲ್ಲಿ

ರಚಿಸಿ ಅವರ ಜೀವನ ಚರಿತ್ರೆಯನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಉಪಮನ್ಯು ಮುನಿಯೆಂಬುವರು ಸಂಸ್ಕೃತದಲ್ಲಿ 'ಭಕ್ತಿ ವಿಲಾಸಂ' ಎಂಬ ಚಂಪೂ ಕಾವ್ಯವನ್ನು ಬರೆದು ಪುರಾತನರ ಕಥೆಯನ್ನು ಹೆಣೆದಿದ್ದಾರೆ. ಕವಿ ಹರೀಶ್ವರನು ತನ್ನ ರಘಟಾಕೃತಿಯಲ್ಲಿ ಪುರಾತನರ ಚರಿತ್ರೆಯನ್ನು ವಿಸ್ತರಿಸಿದ್ದಾನೆ. ಪುಲಿಗೆರೆಯ ಸುರಂಗಕವಿಯು "ತ್ರಿಷಷ್ಠಿ ಪುರಾತನರ ವಿಲಾಸಂ" ಎಂಬ ಚಂಪೂಕಾವ್ಯವನ್ನು ರಚಿಸಿ ಪುರಾತನರ ಜೀವನವನ್ನು ಚಿತ್ರಿಸಿದ್ದಾನೆ. ಇವೂ ಅಲ್ಲದೆ ವೀರಶೈವ ಕಾವ್ಯಾಮೃತಗಳಾದ ವೀರಶೈವ ಮಹಾಪುರಾಣ, ಬಸವಪುರಾಣ, ಪ್ರೌಢರಾಯನ ಕಾವ್ಯ, ಶಿವ ತತ್ವ ಚಿಂತಾಮಣಿ ಮೊದಲಾದ ಕಾವ್ಯಗಳಲ್ಲಿ ಪುರಾತನರ ಹಿರಿಮೆಯು ವರ್ಣಿತವಾಗಿದೆ. ಹೀಗೆ ಪುರಾತನರು ಶೈವಸಂಪ್ರದಾಯದಲ್ಲಿ ಅಗ್ರಗಣ್ಯ ಸ್ಥಾನವನ್ನು ಪಡೆದವರಾಗಿದ್ದಾರೆ. ನಿಜಗುಣರು ತಮ್ಮ ತ್ರಿವಿಧಿಯಲ್ಲಿ ಒಂದೊಂದೇ ಪದ್ಯದಿಂದ ಒಬ್ಬೊಬ್ಬರ ಜೀವನವನ್ನು ಚಿತ್ರಿಸಿ ಸುಂದರ ಭಕ್ತಿಕಾವ್ಯವನ್ನು ಕನ್ನಡಿಗರಿಗೆ ಸಮರ್ಪಿಸಿದ್ದಾರೆ. ತಮಿಳು, ಸಂಸ್ಕೃತ ಮತ್ತು ಕನ್ನಡ ಗ್ರಂಥಗಳಲ್ಲಿ ಪುರಾತನರ ಹೆಸರಿನಲ್ಲಿ ಹಲಕೆಲವು ಬದಲಾವಣೆಗಳಿದ್ದರೂ ಕಥಾವಸ್ತು ಮಾತ್ರ ಒಂದೇ ರೀತಿಯದಾಗಿರುತ್ತದೆ. ಅವರೆಲ್ಲರ ಕಥೆಗಳನ್ನು ಸ್ಥಳಾಭಾವದಿಂದ ಕೈಬಿಡಲಾಗಿದೆ. ಆದರೆ ಕನ್ನಡ ಕಾವ್ಯಗಳಲ್ಲಿ ಅವರ ಹೆಸರುಗಳು ಈ ರೀತಿ ಇವೆ. (೧) ಸೌಂದರನಂಬಿ (೨) ತಿರುನೀಲಕಂಠ (೩) ಇಹಪ್ಪಗೆಯಾಂಡ (೪) ಇಳೆಯಾಂಡ ಗುಡಿಮಾರ (೫) ಸೇದಿರಾಜಯ್ಯ (೬) ಮೆರೆಮಿಂಡದೇವ (೭) ಅಮರನೀತಿ (೮) ಇರಿಭಕ್ತರು (೯) ಏಣಾದಿನಾಥ (೧೦) ಕಣ್ಣಪ್ಪ (೧೧) ಪಂಗಲಿ ಕಲಿಯಾಂಡರು (೧೨) ಮಾನಕಂಜರು (೧೩) ಅರಿವಾಳ್ತಾಂಡರು

(೧೪) ಅನ್ಯೈನಾರರು (೧೫) ವಲಘಂಡಮೂರ್ತಿಗಳು (೧೬) ಮುರುಘರು (೧೭) ರುದ್ರಪಶುಪತಿಗಳು (೧೮) ತಿರುನಾಳ್ಪೋವರು (೧೯) ತಿರುಕುರುಪಿತೊಂಡರು (೨೦) ಚಂಡೇಶರು (೨೧) ವಾಗೀಶ್ವರರು (೨೨) ಕುಲಚ್ಚರಿಯರು (೨೩) ಪಿರುಮುಳಲೆ ಕುರುಂಬರು (೨೪) ಕಾರಿಕಾಲಮ್ಮೆ (೨೫) ಅಪ್ಪೂದಿಯಡಿಗಳು (೨೬) ತಿರುನೀಲನಕ್ಕರು (೨೭) ನಮಿನಂದಿ ಮಹೇಶ್ವರ (೨೮) ಪಿಳ್ಳೈ ನೈನಾರ್ ತಿರುಜ್ಞಾನಸಂಬಂಧಿ (೨೯) ಕಲಿಕಾಮದೇವರು (೩೦) ತಿರುಮುಲದೇವರು (೩೧) ನಾಟ್ಯ ಮಹತ್ತಂಡಿ (೩೨) ಅಚ್ಚುತರು (೩೩) ಸೋಮಾಸೀಮಾರರು (೩೪) ಸಾಂಖ್ಯ ತೊಂಡ (೩೫) ಚಿರುಪುಲಿಯಾಂಡರು (೩೬) ಚಿರುತೊಂಡ ಭಕ್ತರು (೩೭) ಚೇರಮರಾಜರು (೩೮) ಗಣನಾಥಮಾಹೇಶ್ವರ (೩೯) ವೆಳ್ಳ್ಯಾತರು (೪೦) ಪಗಲ್ಚೋಳ (೪೧) ನರಶಿಂಗಮೊನೆಯರು (೪೨) ಅತಿಭಕ್ತಮಾಹೇಶ್ವರ (೪೩) ಕಲಿಕಂಬಮಹೇಶ್ವರ (೪೪) ಕಲಿಯ ನಾಯನಾರರು (೪೫) ಕಳಚಿತ್ತಿಯಾಂಡರು (೪೬) ಐಯ್ಯಡಿಗಳು (೪೭) ಕಣಂಬುಲ್ಲ ನಂಬಿಗಳು (೪೮) ಕದವೂರಕಾರಿಗಳು (೪೯) ಸೌಂದರಪಾಂಡ್ಯ (೫೦) ವಾಹಿಲ್ಯರು (೫೧) ಮೊನೆಯಾಂಡರು (೫೨) ಕುಲಚಂಗಮಾಹೇಶ್ವರ (೫೩) ಆಡವಘೆಯ ಪೆರುಮಾಳರು (೫೪) ಚಿರುತೊಣೆಯಾಂಡರು (೫೫) ಪಗಲ್ ತೊಣೆಯಾಂಡರು (೫೬) ಕೊಲ್ಪುಲಿಯಾಂಡರು (೫೭) ಊರ್ವಶಿಲೆಯಾಂಡರು (೫೮) ಮಾಂಗಾಯಕ್ಕ (೫೯) ನೈಪಭಕ್ತರು (೬೦) ಕಳಚಂಗುಪೆರುಮಾಳೆ (೬೧) ತಿರುನೀಲ ಕಂಠಪಾಣರು (೬೨) ಜಡೆಯ ನೈನಾರರು (೬೩) ಯಸ್ಯಜ್ಞಾನಿ. ಈ ಮಹಾನುಭಾವರ ಜೀವನವನ್ನು ಅರಿಯುವುದು ಮಹದಾನಂದದ ಸಂಗತಿ. ಭಕ್ತಿಮಯ ಜೀವನವನ್ನು ತಮ್ಮ ಪುಟ್ಟ ಕೃತಿಯಲ್ಲಿ ನಿಜಗುಣರು ಭಕ್ತಿಯಿಂದ ಹಾಡಿ ಆನಂದಿಸಿದ್ದಾರೆ.

ಉತ್ತಮಗಣೇಶ್ವರರ ಮೊತ್ತದೊಳು ನಿಜಕೀರ್ತಿ ।
ವೆತ್ತ ಮಹಿಮೆಗಳ ನೊಳ ಕೊಂಡ ಶರಣರರು ।
ವತ್ತು ಮೂವರನೆ ಪೊಗಳುವೆನು ॥

ಎಂದು ಪ್ರಾರ್ಥಿಸುತ್ತಾ

ಶರಣರರುವತ್ತು ಮೂವರ ಮಹಿಮೆಗಳನಿಂತು ।
ಬರೆದೋದಿ ಕೇಳಿ ಪೇಳಿದರ್ಗೆಯು ಸುಖಂ
ದೊರೆವುದಿಹಪರದೊಳಿದು ಸಿದ್ಧ
ವರಚಿಂತಾಮಣಿಯೆನಿಪ ಪರಿಪರಿಯ ಶರಣರೆ ।
ಲ್ಲರ ಮನೋರಥವನೊಲಿದಿತ್ತ ಶಂಭು ನೀ
ನಿರಿಸೆನ್ನನವರ ಸಭೆಯೊಳಗೆ ॥
ಇಂತು ನಿಜಗುಣಯೋಗಿ ಸಂತಸದೊಳೊರೆದಿದನ ।
ಸಂತಮಹಿಮಾಂಬುನಿಧಿ ಶಂಭುತಾನೊಪ್ಪಿ ।
ಸಂತರಿಂ ಪಾಡಿಸುತಮಿರ್ಕೆ ॥

ಎಂದು ಮುಗಿಸಿದ್ದಾರೆ.

## (೨) ಕೈವಲ್ಯ ಪದ್ಧತಿ

ಸರಳವೂ ಸುಂದರವೂ ಆದ ಈ ಕೃತಿ ಕನ್ನಡದಲ್ಲಿ ಪ್ರಸಿದ್ಧವಾದ ಗೀತಕಾವ್ಯ (ಹಾಡುಗಬ್ಬ). ಇಲ್ಲಿರುವ ಗೀತಗಳಲ್ಲಿ ಸಾಹಿತ್ಯ, ತತ್ವ, ಸಂಗೀತಗಳ ತ್ರಿವೇಣೀಸಂಗಮವಾಗಿದೆ. ಈ ಮೂರರಲ್ಲಿಯೂ ನಿಜಗುಣರಿಗಿದ್ದ ಪಾಂಡಿತ್ಯಕ್ಕೆ ಈ ಕೃತಿ ನಿದರ್ಶನ. ಮಾನವಜೀವನದ ಆಗುಹೋಗುಗಳನ್ನೂ ಆದಿ ಅಂತ್ಯಗಳನ್ನೂ ಆತ್ಮಾನುಭವದಿಂದ ಹಾಡಿಕೊಂಡ ಗೀತೆಗಳ ಪುಂಜವೇ ಈ ಕೃತಿ. ಈ ಗ್ರಂಥವನ್ನೋದಿದರೆ ನಿಜಗುಣರು ಸಕಲ ಶಾಸ್ತ್ರಪಂಡಿತರು ಮತ್ತು ವೇದೋಪನಿಷದಾಗಮಾದಿ ಮಹಾಕೃತಿಗಳನ್ನು ಅರಿತು ಅನುಭವದಲ್ಲಿ ಹೊಂದಿದ್ದರೆಂಬುದು ಅರ್ಥವಾಗುತ್ತದೆ. ಸರ್ವಜನ ಮಾನ್ಯನಾದ ಈ ಕೃತಿ, ಸಾಹಿತ್ಯ ಮತ್ತು ಸಂಗೀತ ದೃಷ್ಟಿಯಿಂದಲೂ ನೈತಿಕ ಹಾಗೂ ಸಾಮಾಜಿಕ ವಿಚಾರ ವಿವರಣೆಯ

ದೃಷ್ಟಿಯಿಂದಲೂ ಕನ್ನಡ ಭಂಡಾರಕ್ಕೆ ಅವರು ಅರ್ಪಿಸಿದ ಅನರ್ಘ್ಯ ರತ್ನ.

ಈ ಕೃತಿಯಲ್ಲಿ ಶಿವಕಾರುಣ್ಯ ಸ್ಥಲ, ಜೀವಸಂಬೋಧನಸ್ಥಲ, ನೀತಿ ಕ್ರಿಯಾಚರ್ಯ ಸ್ಥಲ, ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ, ಶಿವಯೋಗ ಮತ್ತು ಜ್ಞಾನಪ್ರತಿಪಾದನಾಸ್ಥಲಗಳೆಂಬ ಒಂಬತ್ತು ಪ್ರಕರಣಗಳಿವೆ. ಮೊದಲ ಪ್ರಕರಣದಲ್ಲಿ:

"ಶ್ರೀಗುರುವಚನೋಪದೇಶವ ನಾಲಿಸಿ ।
ದಾಗಳಹುದು ನರರಿಗೆ ಮುಕುತಿ"
..................................
ಬಿಸಿದಿರದ್ವೈತವನು ಬಾಹ್ಯದಲಿ ನಿ ।
ನ್ನೊಳಗೇಕೋ ಭಾವನೆಯೊಡಗೂಡು ॥
ತಿಳಿದು ಸಮಯನಿಷ್ಠೆಗಲಿ ವೇದವಿಧಭಕ್ತಿ ।
ಗಳನಗಲದಿರೆಂದುಸುರುವ ॥೫॥
ಆರುನಾನೆಂದು ವಿಚಾರಿಸು ವಿಷಮಸಂ ।
ಸಾರವಿದನು ಕನಸೆಂದರಿ ॥
ಮಾರಮರ್ಧನ ಶಂಭುಲಿಂಗವ ನೊಲಿಸಿಗಂ ।
ಭೀರ ಸುಖದೊಳಿರೆಂದರುಪುವ"

ಎಂದು ಹಾಡುತ್ತಾ ಮಾನವಜೀವನದ ದಾರಿ ಮತ್ತು ಗುರಿಯನ್ನು ಸುಂದರವಾಗಿ ಬಿತ್ತರಿಸಿದ್ದಾರೆ. ವೇದಾಂತ ಸಿದ್ಧಾಂತಗಳ ಸಾರವನ್ನು ರಸಪಾಕವಾಗಿ ಮಾಡಿಕೊಟ್ಟಿದ್ದಾರೆ.

ಜೀವಸಂಬೋಧನಸ್ಥಲದಲ್ಲಿ ಆತ್ಮನಿವೇದನೆಯ ಗೀತೆಗಳಿವೆ. ತಮ್ಮ ಆತ್ಮಕ್ಕೆ ತಾವೇ ಜೀವನಮಾರ್ಗವನ್ನು ನಿವೇದಿಸಿಕೊಳ್ಳುತ್ತಾರೆ. ಈ ನಿವೇದನೆಯು ಫಲ ಕೊಡಲು ಮನಸ್ಸು ಕಾರಣ.

ಮನಸ್ಸಿಗೆ ಬೋಧೆ ಮಾಡುತ್ತಾರೆ. ಇದು ಸ್ವಗತ ವಿಚಾರಧಾರೆ. ಆದರೆ ಅದು ಜಗತ್ತಿಗೇ ನೀಡಿದ ಸಂದೇಶದಂತಿದೆ.

"ನೆನೆವುದನುದಿನದುದಯ ಕಾಲದೆಚ್ಚರಿಕೆಯೊಳು
ವಿನುತ ಗುರುಮೂರ್ತಿಯನುಮೇಶನಂಘ್ರಿಯನು ನಿ
ನ್ನನು ಬಳಿಕಸುವಿಚಾರದಿಂದೆ ನೇಮಕವಾಗಿ
ಮನುಜ ನಿನಗಹುದುಮುಕ್ತಿ"

ಎಂದು ನಿತ್ಯಜೀವನದಲ್ಲಿ ಎಚ್ಚರಿಕೆಯಿರಬೇಕೆಂಬುದನ್ನು ಅರುಹುತ್ತಾರೆ.

ಮನುಜನೀನಖಿಳ ಭೋಗಾಶ್ರಯಂಗಳ ಮಿಗಿಲ ।
ನನುಕರಿಸಿ ನೋಡಿ ಮತ್ತೀನೆಲದೊಳು ॥
ಘನದುರಾಶೆಯನುಮಾಡಿದರೆ ನಿನ್ನಂತೆ ಜಡ ।
ರೆನಿಸುವವರುಂಟೆ ಭಾವಿಸಿ ನೋಡಲು ॥

ಎಂದು ಮನುಷ್ಯನ ಪ್ರವೃತ್ತಿಯನ್ನು ಕಂಡು ಪಶ್ಚಾತ್ತಾಪ ಪಡುತ್ತಾರೆ.

ನೀತಿಕ್ರಿಯಾಚರ್ಯೆಗಳು ಈ ಕೃತಿಯಲ್ಲಿ ಅತಿಮಹತ್ವದಿಂದ ಕೂಡಿರುವುದು. ಮನುಷ್ಯನು ಪರಮಾತ್ಮನಿಂದ ದೂರವಿರುವುದಕ್ಕೆ ಕಾರಣವನ್ನೂ ಪರಿಹಾರಮಾರ್ಗವನ್ನೂ ಸೂಚಿಸುತ್ತಾರೆ.

ಎಂತೊಲಿವನೋ ತನಗಿನ್ನೆಂತೊಲಿವನೋ ।
ಎಂತೊಲಿವನೋ ಕರಣತ್ರಯದ ದೋಷವಿರೆ ।
ಕಂತುಕಾಲಪುರವೈರಿ ಗುರುಶಂಭುಲಿಂಗ ॥ಪ॥

ಪರವಧುವಿನಕೂಟ ವನ್ಯರವಿತ್ತಾಪ । ಹರಣವಭಕ್ಷ್ಯಸೇವನೆ ಹಿಂಸೆ ।
ಪರಿವಿಡಿದೀ ನಾಲ್ಕು ಪಾತಕಂಗಳು ಪಾ ।
ಮರಜನ್ಮವೀಯೆ ಕಾಯದೊಳೊಂದಿರೆ ತನಗೆಂತೊಲಿವನೋ ॥೧॥

ಪ್ರಸಿಯನನುಚಿತ ನಿಷ್ಠುರತ್ವಪೈಶೂನ್ಯತೆ ।
ಮಾನಸಿಕದೀ ನಾಲ್ಕು ದೋಷಂಗಳು ॥
ಪರಮಪಕ್ಷಿಮೃಗಯೋನಿಯೊಳಗೆಳದೊಯ್ದು ಪ್ರ ।
ಟ್ಟಿಸುವ ವಚನದೊಳಿಡೆವಿಡದಿರೆ ತನಗೆಂತೊಲಿವನೋ ॥೨॥

ಜನರೊಳಿಂಬದ ಕಾರ್ಯದೆರಕವನಿಷ್ಟಚಿಂತನೆ ।
ಖುನ್ಯಧನಸತಿಯುರಕಾಂಕ್ಷೆ ॥
ಎನಿಸುವೀನಾಲ್ಕುದುರಿತ ಜನನವೀಯೆ ।
ಮನದೊಳೊಂದಿರೆ ಶಂಭುಲಿಂಗ ತನಗೆಂತೊಲಿವನೋ ॥೩॥

ಈ ಪದ್ಯದಲ್ಲಿ ಮನುಷ್ಯನ ಬಂಧನಕ್ಕೆ ಕಾರಣವಾಗುವ ಪ್ರವೃತ್ತಿಗಳನ್ನೆಲ್ಲಾ ಸುಂದರವಾಗಿ ಚಿತ್ರಿಸಿ ಹಾಡಿ ಅನುಕಂಪ ತೋರಿದ್ದಾರೆ.

ಪರಮಾತ್ಮನ ನಿಶ್ಚಲಧ್ಯಾನ ಉನ್ನತಿಗೆ ಕಾರಣ. ಧ್ಯಾನಕ್ಕೊಂದು ಕುರುಹು ಬೇಕು. ಈ ಕುರುಹು ಮಂತ್ರರೂಪದಲ್ಲಿ ಮನೋವಾಕ್ಕಾಯಗಳಲ್ಲಿ ಕಲ್ಪಿತವಾಗಬೇಕು. ಆದರಿಂದ ಮುಕ್ತಿ ಸಾಧನೆಯೆಂಬುದನ್ನು ಮಂತ್ರಯೋಗಪ್ರಕರಣದಲ್ಲಿ ತಿಳಿಸುತ್ತಾರೆ.

"ಮೀರೆ ಬಹುವಿದ್ಯೆಯೊಳು ಬಳಲುವರು ತಮ್ಮೊಳಗೆ ।
ತೋರುವ ಮಹಾಮಂತ್ರವನು ಜಪಿಸದೆ ॥
.....................................
ನೋಡಲಿಂತಹುಳ ಮಂತ್ರಾಳಿವಾಚಕವದನು ।
ಕೂಡಿರ್ಪ ಶಂಭುಲಿಂಗವೆ ವಾಚ್ಯವು ॥
ರೂಢಿವೆತ್ತೀಮರಿಯೊಳಿಹುದನಾರೈದೆಳಸಿ ।
ಮಾಡೆಜಪವನು ಮುಕ್ತಿಸಿದ್ಧಿಯಹುದು ॥"

ಎಂದು ಮಂತ್ರಶಕ್ತಿಯ ಫಲವನ್ನು ಸೂಚಿಸುತ್ತಾರೆ.

ಲಯಯೋಗಪ್ರಕರಣದಲ್ಲಿ ಮಂತ್ರನಿಷ್ಠೆಯ ಪೂರ್ಣರೂಪದ ಚಿತ್ರವಿದೆ. ಗೀತೆಯಲ್ಲಿ ಹೇಳುವ ಸ್ಥಿತಪ್ರಜ್ಞಾವಸ್ಥೆಗಿಂತಲೂ ಮಿಗಿಲಾದ ನಿತ್ಯಾನಂದಾವಸ್ಥೆಯ ವರ್ಣನೆಯಿದೆ.

ಈ ಗೀತೆಯಲ್ಲಿ ಹಠಯೋಗಸಾಧನಾಕ್ರಮವನ್ನು ಅದರ ಪರಿಣಾಮವನ್ನು ಸುಂದರವಾಗಿ ಸೂಚಿಸಿದ್ದಾರೆ.

"ಯೋಗಶ್ಚಿತ್ತವೃತ್ತಿನಿರೋಧಃ" ಎಂದು ಪಾತಂಜಲಿಯು ಹೇಳುತ್ತಾರೆ. "ಯೋಗಃ ಕರ್ಮಸು ಕೌಶಲಂ" "ಯೋಗಃ ಸಮತ್ವ ಉಚ್ಯತೇ" ಎಂದು ಗೀತೆಯಲ್ಲಿ ಹೇಳಿದೆ. ಯೋಗ ಎಂದರೆ ಕೂಡಿಸುವುದು. ಜೀವಾತ್ಮ ಪರಮಾತ್ಮರ ಸಂಯೋಗ-ಸಂಧಾನ ಸಂಪಾದವೇ ಯೋಗ. ಈ ಅನುಭವವನ್ನು ಮಾನವ ತನ್ನ ಸತತ ಸಾಧನೆಯಿಂದ ಪಡೆಯುತ್ತಾನೆ. ಮನಸ್ಸನ್ನು ಹೃದಗುಹೆ ಗುರಿಯಲ್ಲಿ ಹರಿಯನ್ನು ಕಾಣುತ್ತಾನೆ. ಮನಸ್ಸು, ಶ್ವಾಸೋಚ್ಛ್ವಾಸಗಳು ದೃಷ್ಟಿ ಒಂದುಮಾಡುವ ಸಾಧನೆಗೆ ರಾಜಯೋಗವೆಂದು ಕರೆಯುತ್ತಾರೆ. ರಾಜಯೋಗಪ್ರಕರಣದಲ್ಲಿ—

ಯೋಗಿಗಲ್ಲದೆ ದೊರೆವುದೆ ಪರತರಮುಕ್ತಿ ॥
ಆಸನಾಸನತೆ ಶರೀರದ ಸ್ಥಿರತೆ ।
ಕರಣಕರದ ನಿಶ್ಚಲತೆ ॥
ಮರುತನಾದದೃಷ್ಟಿಗಳೊಂದಾಗುವತೆ ।
ಪರಹೃದಯಾನುಸಂಧಾನತೆ
...............................
ಮೂರುಸ್ಥಾನದ ಮಹಿಮೆಯ ನಾದವನು ಕೇಳಿ ।
ಮೀರುತದನು ವಾಗೀಶ್ವರಿಯೊಳು ॥
ಸೇರಾಗಿಮನದೊಡನ ಚಿಜ್ಯೋತಿಯೊಳೊಂದಿ ।
ತೋರುವ ಶಂಭುಲಿಂಗೈಕ್ಯತೆ ॥

ಎಂದು ರಾಜಯೋಗದ ಸ್ವರೂಪದರ್ಶನವನ್ನು ವಿವರಿಸಿದ್ದಾರೆ.

ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗಗಳು ನಿರಂತರ ಸಾಧಕರಾಗಿ ಅದೇ ವೃತ್ತಿಯಲ್ಲಿರುವವರಿಗೆ ಸುಲಭಸಾಧ್ಯವಾಗಬಹುದು. ನಿತ್ಯಜೀವನದಲ್ಲಿಯೇ ಮುಕ್ತಿ

ಗೊಳಿಸುವ ಮಾರ್ಗವನ್ನು ಜನರು ಅಪೇಕ್ಷಿಸುವುದು ಸಹಜ ಮತ್ತು ಅಂತಹ ಸುಲಭಮಾರ್ಗದ ಆವಶ್ಯಕತೆಯಿದೆ. ಇದನ್ನು ವಿಚಾರಮಾಡಿದ ಮಹಾನುಭಾವರು ಪ್ರಯೋಗನಡೆಸಿ ದಾರಿಯನ್ನು ಕಂಡುಕೊಂಡರು. ಅದಕ್ಕೆ ಶಿವಯೋಗವೆಂದು ಕರೆದರು. ನಿತ್ಯವ್ಯವಹಾರದಲ್ಲಿದ್ದರೂ ಸುಲಭಸಾಧ್ಯವಾದ ಮಾರ್ಗ ದೊರೆತರೆ ಎಲ್ಲರಿಗೂ ಆನಂದ. ಪರವಸ್ತುವನ್ನು ಕಾಣಲು ಅರಿವು ಬೇಕು. ಅರಿವಿಗೊಂದು ಕುರುಹುಬೇಕು. ಅದಕ್ಕಾಗಿ ಲಿಂಗವೆಂದು ರೂಪವನ್ನು ನಿರೂಪಿಯು ದರ್ಶನಕ್ಕಾಗಿ ಸೃಷ್ಟಿಸಿ ಅದನ್ನು ದೃಷ್ಟಿಸುವುದರಿಂದಲೇ ಯೋಗಸಿದ್ಧಿ ಪಡೆಯುವುದನ್ನು ಕಲಿತರು.

"ಪರತರ ಶಿವಲಿಂಗವೆಳಸಿ ನಿನಗಾಗಿ ।
ಕರಕಂಜದೊಳು ಕಾಣಿಸಿತು ಯೋಗಿಯುಜಿಸು ॥

.....................................
ಮೂರು ಮಂಡಲವನುಜ್ಜ್ವಳಿಸಿ ಗುಣವರ್ನ ।
ಮೂರನು ಮೀರಿ ಬೋಧಮಾತ್ರವಾಗಿ ॥
ತೋರುವ ಗುರುಶಂಭುಲಿಂಗವದು ತಾನೆ ।
ಬೇರೆನಿಸದೆ ನಿನ್ನಕಣ್ಣಮುಂದಿಹುದು ॥"

ಎಂಬ ಪದ್ಯದಲ್ಲಿ ಲಿಂಗಾನುಸಂಧಾನದಿಂದಾಗುವ ಶಿವಯೋಗ ಸಂಪದಸೌಖ್ಯವನ್ನು ವಿವರಿಸಿದ್ದಾರೆ.

ಶಿವಯೋಗಸಂಪದವನ್ನು ಸಂಪಾದಿಸಿದಮೇಲೆ ಜೀವಾತ್ಮ ಪರಮಾತ್ಮರಲ್ಲಿ ಭೇದ ಉಳಿಯುವುದಿಲ್ಲ. ಜೀವನು ಸಂಸಾರದಲ್ಲಿದ್ದರೂ ತಾವರೆ ನೀರಿನಲ್ಲಿರುವಂತೆ ಬೆರಸಿ ಬೇರಾಗದ ಸ್ಥಿತಿ. ಆ ಸ್ಥಿತಿಯನ್ನು ಉಳಿಸಿ ಬೆಳೆಸಿಕೊಂಡುಬರುವ ಮಾರ್ಗವೇ ಜ್ಞಾನ. ಇದನ್ನು ಜ್ಞಾನಪ್ರತಿಪಾದನಾಸ್ಥಲದಲ್ಲಿ ಹಲವಾರು ರೀತಿಯಿಂದ ವರ್ಣಿಸಿದ್ದಾರೆ. ಶಿವಯೋಗನಿಷ್ಠೆಯಿಂದಾಗುವ ಪರಿಣಾಮವೇ ಈ ಜ್ಞಾನದ ಪ್ರಾಪ್ತಿ.

"ಅರಿವೆ ತಾನೆಂದು ನಂಬಿ ನಿಂದೊಡೆ ಮುಕ್ತಿ ।
ಪೆರತಿಲ್ಲವೆಂದುದು ನಿಗಮೋಕ್ತಿ ॥ಪ॥

....................................
ಭಾವಕಲ್ಪನೆ ಭೇದ ಬಣ್ಣ ವಳಿದುಪ್ಪೋಗಿ ।
ಜೀವತ್ವವನು ನೆರೆನೀಗಿ ॥

ಶ್ರೀಪಿ ಶಂಭುಲಿಂಗದೊಲುಮೆ ಯುಚ್ಚರವಾಗಿ ।
ಕೈವಲ್ಯ ಪಡೆದವನೆ ಯೋಗಿ ॥" ಮತ್ತು
"ಆರು ನಾನೆಂದು ವಿಚಾರಿಸಿ ತಿಳಿಯೆಸಂ ।
ಸಾರಸಾಗರವನುತ್ತರಿಪುದರಿದೆ ॥

....................................
ಪರಮಜೀವಾಂತರ ವಿಶ್ವತೈಜಸ ಪ್ರಾಜ್ಞ ।
ತುರೀಯಾದ ವಿಷಯುವ್ವಕ್ಕ ಗಳಿವಾನಲ್ಲ ॥
ಪರತರಾನಂದೈಕ ರಸರೂಪ ದೃಶಿಮಾತ್ರ ।
ಗುರುಶಂಭುಲಿಂಗದ ನಿಜವೆ ತಾನಾಗಿ ॥"

ಮೊದಲಾದ ಪದ್ಯಗಳಲ್ಲಿ ಯೋಗಜ್ಞಾನದರ್ಶನವನ್ನು ಮನೋಹರವಾಗಿ ಚಿತ್ರಿಸಿದ್ದಾರೆ. ಈ ಕೃತಿಯಲ್ಲಿರುವ ಪ್ರತಿಯೊಂದು ಗೀತವೂ ಶಾಸ್ತ್ರೀಯವಾಗಿ ಸಂಗೀತ ತಾಳ ಲಯಬದ್ಧವಾಗಿ ವಿರಚಿಸಲ್ಪಟ್ಟಿವೆ. ಈ ಗ್ರಂಥವನ್ನೋದಿದವರಿಗೆ ನಿಜಗುಣರು ಸಾಹಿತಿಗಳು ವೇದಾಂತಿಗಳು ಮಾತ್ರವೇ ಅಲ್ಲ, ಅದ್ವಿತೀಯ ಸಂಗೀತಜ್ಞರೆಂಬುದು ಅರಿವಾಗುವುದು. ನಾಡುಜೀವಿಗಳ ಒಡನಾಡಿಯಾಗಿ ಮಧುಧ್ವನಿಸುವ ಹಾಡುಗಬ್ಬಗಳ ಈ ಕೃತಿಯ ಹಿರಿಮೆಗೆ ಅನೇಕ ಜ್ಞಾನಿಗಳು ಅನುಭಾವಿಗಳು ಮಾರುಹೋಗಿದ್ದಾರೆ. ಮಾನವನ ಬಾಳಿನ ದಾರಿದೀಪವಾಗಿದೆ ಈ ಕಾವ್ಯ. ಈ ಕೃತಿಯ ಸೂಕ್ಷ್ಮ ಪರಿಚಯದಲ್ಲಿ ಅನೇಕ ಮಹತ್ತರ ವಾಕ್ಯಗಳನ್ನು ತೋರಿಸಲಾಗಲಿಲ್ಲ. ಈ ಕೃತಿಯು ಒಂದು ಕಾಲದಲ್ಲಿ ಭಿಕ್ಷುಕನಿಂದ ಹಿಡಿದು ಲಕ್ಷಾಧೀಶನವರೆಗೆ ಒಡನಾಡಿಯಾಗಿತ್ತು.

ಈ ಕೃತಿಯು ಒಂದು ಗೀತವಾದರೂ ಬರೆದಿದ್ದರೆ ಕನ್ನಡಿಗರ ವಿದ್ವತ್ತಿಗೆ ಮಾನ್ಯತೆಯೇ ದೊರೆಯುತ್ತಿರಲಿಲ್ಲವೆಂಬ ಪ್ರತೀತಿಯಿದೆ.

## (೩) ಪರಮಾರ್ಥ ಪ್ರಕಾಶಿಕೆ

ಇದು ಕನ್ನಡದಲ್ಲಿ ಪ್ರಧಾನ ಯೋಗಗ್ರಂಥ. ನಿಜಗುಣರು ಯೋಗಶಾಸ್ತ್ರದಲ್ಲಿ ಪರಿಣತರು ಮಾತ್ರವೇ ಆಗಿರಲಿಲ್ಲ. ಯೋಗ ಸಿದ್ಧಿಯನ್ನು ಪಡೆದು ಶಿವಯೋಗಿಗಳಾಗಿದ್ದರು. ಆದುದರಿಂದಲೇ ತಮ್ಮ ಕೈವಲ್ಯಪದ್ಧತಿಯಲ್ಲಿ ಯೋಗಸ್ವರೂಪವನ್ನು ರಮ್ಯವಾಗಿ ಹಾಡುಗಬ್ಬದಲ್ಲಿ ರಚಿಸಿದ್ದಾರೆ. ಈ ಕೃತಿಯು ಚನ್ನಸದಾಶಿವ ಯೋಗಿಗಳ ಶಿವಯೋಗಪ್ರದೀಪಿಕೆಯೆಂಬ ಸಂಸ್ಕೃತಗ್ರಂಥದ ಭಾವಾನುವಾದ ಅರ್ಥಾತ್ ಭಾಷಾಂತರವೇ ಆಗಿದೆ. ಚನ್ನಸದಾ ಶಿವಯೋಗಿಗಳ ಶಿವಯೋಗಪ್ರದೀಪಿಕೆಗೆ ಬಸವಾರಾಧ್ಯರೆಂಬು ವರು ಕನ್ನಡದಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾರೆ. ಅವರಿಗೆ ನಿಜಗುಣರ ಪರಮಾರ್ಥಪ್ರಕಾಶ ಗ್ರಂಥದ ಸಹಾಯ ದೊರೆತಂತೆ ಕಾಣುತ್ತದೆ.

ಈ ಗ್ರಂಥಾರಂಭದಲ್ಲಿ ನಿಜಗುಣರು "ಶ್ರೀಮನ್ನಿರಂಜನ ಮೋಕ್ಷೈಕಸಾಧನಂಗಳಾದ ಕಾಮಿಕಾದಿ ವಾತುಲಾಂತಮಾದ ಶಿವಾಗಮಂಗಳಲ್ಲಿಯ ಜ್ಯೋತಿಜ್ಞಾನಪ್ರಕರಣ, ಸ್ವಾತ್ಮಜ್ಞಾನ ಪ್ರಕರಣ, ಅವಧೂತಪ್ರಕರಣ, ಯೋಗಾನಂದಪ್ರಕರಣದಲ್ಲಿಯು ಜ್ಞಾನ-ಕ್ರಿಯಾ – ಚರ್ಯಾ – ಯೋಗಪ್ರವೀಣನಾದ ವೇದ ವೇದಾಂತ ವೇದನಾವಿಚಕ್ಷಣನಾದ ಸಾಂಖ್ಯಪಾತಂಜಲಾದ್ಯನೇಕ ಯೋಗಶಾಸ್ತ್ರ ಸಂಭ್ರಮಕ್ಕೆ ಗೋಚರವಲ್ಲದ ನಿಜಯೋಗಸಿದ್ಧ ವಾದ, ಬಿಂದುನಾದಾದ್ಯನೇಕ ವಸ್ತು ವಿಸ್ತಾರಮಂ ಪಿಂಡ ಮಧ್ಯ

ದಲ್ಲಿ ಕಾಣಿಸಲು ಕುಶಲನಾದ, ಮಂತ್ರಾದಿಯೋಗಪರಿಚಿತವಾದ, ಸ್ವಾನುಭಾವಸಿದ್ಧವಾದ ಲೌಕಿಕ ಬ್ರಹ್ಮೋಪದೇಶಾಖಿಳರಹಸ್ಯೋಪದೇಶಿಕನಾದ ಚೆನ್ನಸದಾಶಿವಯೋಗೀಶ್ವರನೆನಿಸುವಾಚಾರ್ಯನು ಮುಮುಕ್ಷುಗಳ ಹೃದಯ ಗುಹಾಂತರಾಳವ ಬೆಳಗಲೆಂದು ಶಿವಯೋಗಪ್ರದೀಪಿಕೆಯೆಂಬ ಯೋಗಶಾಸ್ತ್ರವಂ ಮಾಡಲುದ್ಯೋಗಿಸಿ ನಿರ್ವಿಘ್ನದಿಂದದು ಪರಿಸಮಾಪ್ತಿಯಾಗಲೋಸುಗವಾಗಿ ಶ್ರೀಗುರು ನಮಸ್ಕಾರ ಲಕ್ಷಣ ಮಂಗಳಾಚರಣಂಗೈದನದೆಂತೆಂದೊಡೆ" ಎಂದು ಹೇಳಿರುವುದರಿಂದ ಗ್ರಂಥದ ಹಿರಿಮೆ ಮತ್ತು ಮೂಲ ಕರ್ತೃವಿನಲ್ಲಿ ನಿಜಗುಣರಿಗಿರುವ ಭಕ್ತಿಯ ಪರಿಚಯ ನಮಗಾಗುತ್ತದೆ.

ಕೈವಲ್ಯಪದ್ಧತಿಯಲ್ಲಿ ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ ಮತ್ತು ಶಿವಯೋಗದ ಸ್ವರೂಪವನ್ನು ವಿವರಿಸಿದಾರೆ. ಅಲ್ಲಿ ಆಯಾ ಯೋಗದ ಮೇಲ್ಮೆಯನ್ನೂ ಪರಿಣಾಮವನ್ನೂ ತಿಳಿಸಿದ್ದಾರೆ. ಈ ಕೃತಿಯಲ್ಲಿ ಈ ಮೇಲ್ಕಂಡ ಯೋಗಗಳ ತಾರ್ಕಿಕ ಹಾಗೂ ತುಲನಾತ್ಮಕ ವಿವೇಚನೆಯಿದೆ. ಎಲ್ಲ ಯೋಗಮಾರ್ಗಗಳಿಗಿಂತ ಶಿವಯೋಗ ಸುಲಭವೂ ಶ್ರೇಷ್ಠವೂ ಆದ ಮಾರ್ಗವೆಂದು ತಿಳಿಸುತ್ತಾರೆ. ಈ ಮಾರ್ಗವಿಮರ್ಶೆ ಆಧುನಿಕ ವಿಜ್ಞಾನ ವಿಮರ್ಶೆಯಿಂದಲೂ ಒಪ್ಪುವಂತಿದೆ. ಮಾನವನ ಸಾಮಾನ್ಯ ಪ್ರಕೃತಿ ಪ್ರವೃತ್ತಿಗಳನ್ನು ಅರಿತು ಯೋಗ ಸಾಧನೆಗೆ ಸುಲಭ ಮಾರ್ಗಗಳನ್ನು ಕಲ್ಪಿಸಿದೆ ಶಿವಯೋಗದಲ್ಲಿ. ವಿಚಾರವಾದಿಗಳ ಮನಸ್ಸಿಗೆ ಉಲ್ಲಾಸಕೊಡುವ ವಿಮರ್ಶೆ ದೊರೆಯುತ್ತದೆ. ಕನ್ನಡದಲ್ಲಿ ಯೋಗಶಾಸ್ತ್ರದ ಆದ್ಯ ಗ್ರಂಥವಾದುದರಿಂದ ಮುಮುಕ್ಷುಗಳಿಗೆ ಅಪಾರವಾಗಿ ನೆರವಾದ ಗ್ರಂಥವೇ ಪರಮಾರ್ಥ ಪ್ರಕಾಶಿಕೆ. ಭಾರತೀಯ ಸಾಂಸ್ಕೃತಿಕ

ಸಂಪತ್ತಿನ ಮತ್ತೊಂದು ಮುಖವಾದ ಆಗಮಗಳ ಆಧಾರದ ಮೇಲೆ ರಚಿತವಾಗಿರುವ ಈ ಕೃತಿ ಮಹತ್ವಪೂರ್ಣ ಕೊಡುಗೆಯಾಗಿದೆ.

## (೪) ಅನುಭವಸಾರ

ಇದು ದಶೋಪನಿಷತ್ತುಗಳ ಸಾರ. ತ್ರಿವಿಧಿಯಲ್ಲಿ ರಚಿತವಾಗಿರುವ ಈ ಕೃತಿಯಲ್ಲಿ ೮ ಸಂಧಿ, ೪೬ ಸೂತ್ರ, ೫೩೫ ತ್ರಿವಿಧಿಗಳಿವೆ. ಗ್ರಂಥದ ಕೊನೆಯಲ್ಲಿ—

ಕಂದ॥ ತ್ರಿವಿದಿಗಳೈ ನೂರ್ಮೇಲೈ ।
ದವಧಿಯ ಮೂವತ್ತು ಸೂತ್ರಗಳು ನಾಲ್ವತ್ತಾ ॥
ರವರಿರ್ದ ಸಂಧಿಯೆಂಟನು ।
ಭವಸಾರದೊಳ್ಸೆವವಖಿಳ ವಿಬುಧರ್ಮೆಚ್ಚಲ್ ॥

ಎಂದು ಹೇಳಿಕೊಂಡಿದ್ದಾರೆ.

ತ್ರಿವಿಧಿ॥ ಶ್ರುತಿಯನೇ ಸ್ಮರಿಸಿ ಪೇಳ್ದತಿಶಯದ ಋಷಿವಾಕ್ಯ ।
ಸ್ಮೃತಿಯೆನಿಸಿ ಲೋಕದೊಳು ಸೇವ್ಯವೆನಿಸಲಾ ।
ಶ್ರುತಿಯೇ ಪ್ರಮಾಣವಖಿಳರ್ಗೆ ॥

ಆದರೊಳುತ್ತರಭಾಗೆಯದುತಾನೆಯುಪನಿಷ ।
ತ್ತದರಿಂದೆ ಮುಕ್ತಿಯಹುದು ವಿದ್ಯಾತತ್ತ್ವ ।
ವದರೊಳಿಹುದಾದ ಕತದಿಂದೆ ॥
..............................

ಇಲ್ಲಿಹ ಪ್ರಯೋಜನಂ ಸಲ್ಲಲಿತದಾತ್ಮಸುಖ ।
ವಿಲ್ಲಿ ಜೀವೇಶರೇಕತ್ವವದು ವಿಷಯ ।
ವಿಲ್ಲಿ ಸಚ್ಛಿಷ್ಯ ನಧಿಕಾರಿ ॥
.....................

ಎಂದು ಹೇಳಿರುವುದರಿಂದ ಈ ಗ್ರಂಥದ ವಿಷಯವೇನೆಂಬುದರ ಅರ್ಥವಾಗುತ್ತದೆ.

ನಿರುಪಾಧಿಕ ಜ್ಯೋತಿ, ನಿರತಿಶಯ ಸತ್ಯ, ನಿಜನಿರಾವರಣ ಎಂದು ಪರವಸ್ತುವಿನ ಕಲ್ಪನೆ ಮಾಡಿ ಜಗತ್ತು ಪರವಸ್ತುವಲ್ಲ. ಮಾಯೆ ಸದ್ರೂಪಿಣಿಯೇ ನಿಖಿಳಜಗವಾಗಿ ಪರಿಣಮಿಸಿದೆ. ಈ ಮಾಯೆ ಪರವಸ್ತುವಿನಿಂದ ಕಲ್ಪಿತವಾದ ಪರಮಾರ್ಥವೆಂದು ಹೇಳಿದರೆ ವೇದೋಕ್ತವಾದ ಅದ್ವೈತಕ್ಕೆ ಲೋಪಬರುತ್ತದೆ. ಆದುದರಿಂದ ಜಗತ್ತು ಪರಮಾತ್ಮನ ವಿಕಾಸವೆನ್ನಲಾಗುವುದಿಲ್ಲ ಎಂದು ಪರವಸ್ತು ಮತ್ತು ಪ್ರಪಂಚದ ವಿವರಣೆ ಕೊಡುತ್ತಾ "ಪರಿಪೂರ್ಣ ಗಗನವೀಪರಿಯ ಮಾರ್ಪೊಳಿವಂತೆ। ಭರಿತವಹ ಚಿತ್ತು ಶಿವಜೀವರೆನಿಸಿ ಸಂ। ಚರಿಸುವದುಪಾಧಿವಶದಿಂದ ॥.... ಪ್ರಕೃತಿಯಿಂದೀಶತ್ವ ವಿಕೃತಿಯಿಂಜೀವತ್ವ। ಸಕಲಭೂತಗಳಿಂದೆ ಭುವನತ್ವವಹು। ದಕಲಂಕ ನೀನರಿವುದಿಂತು ॥" ಎಂದು ಶಿವ ಜೀವ ಜಗತ್ತಿನ ವಿಮರ್ಶೆಯನ್ನು ನೀಡುತ್ತಾರೆ. ಬಹುಮುಖ ವಾದ ಕನ್ನಡಿಯಲ್ಲಿ ಒಂದೇ ಮುಖವು ಬಹುವಿಧವಾಗಿ ತೋರು ವಂತೆ ಜೀವನಿಗೆ ಅನಾದಿಯಾದ ಅಜ್ಞಾನಭೇದದಿಂದ ವಿಕಾರ ಜಪವೇ ನಿಜವೆಂಬಂತೆ ಕಾಣುತ್ತದೆ. ಆದರೆ ವಿಕಾರ ಸಹಜವಲ್ಲ. ಹಡಗನೇರಿದವಂಗೆ ತಡಿಯೊಳಿರ್ಪಚಲಂಗಳಿಡೆಯಾಡುವಂತೆ ಜಡಮತಿಗೆ ವಿಕೃತಿಯಂ। ಪಡೆದಂತೆ ತೋರುತಿಹನಾತ್ಮ" ಎಂದು ಸುಂದರ ಉಪಮೆಯನ್ನು ನೀಡುತ್ತಾರೆ. ಲೋಕದಲ್ಲಿ ಭಿನ್ನಜನ ಭಿನ್ನರುಚಿ ಭಿನ್ನವಸ್ತುಗಳನ್ನು ಕಾಣುತ್ತೇವೆ. ಎಲ್ಲದರಲ್ಲಿಯೂ ಆತ್ಮವಿದೆಯೆಂದು ಶ್ರುತಿ ಸಾರುತ್ತದೆ. ಆದರೆ ಅನೇಕಾತ್ಮಗಳಿವೆ ಎಂಬ ಪ್ರಶ್ನೆಗೆ ಉತ್ತರ ಕೊಡುತ್ತಾ "ಚಿತ್ತೊಂದೆ ಬುದ್ಧಿಗಳ ಮೊತ್ತದಳನೇಕಮಂ। ಪೊತ್ತು ನಾನಾತ್ಮರೆನಿಸಿರ್ಪುದಾಗಿ ಬಹು।

ವೃತ್ತಿಯದ್ವೈತದೊಳಗಕ್ಕು ॥" ಎಂದು ಸುಂದರ ಉದಾಹರಣೆ ಗಳೊಡನೆ ಆತ್ಮನು ಒಬ್ಬನೇ ಎಂಬುದನ್ನು ಸಾಧಿಸುತ್ತಾರೆ. ಆದರೆ ಈ ವಿಕೃತಿಯಾದ ಜಗತ್ತು "ಎಂತು ನಿರ್ಮಳ ಮುಕುರ ದಂತರಾಳದೊಳು ಗಜ। ವೆಂತು ತರುಸರಸಿಯೊಳು ಪೊಳೆದು ತೋರುತಿಹ। ವಂತೆಲ್ಲವಾತ್ಮನೊಳು ತೋರ್ಕು ॥" ಎಂದು ಆತ್ಮನಲ್ಲಿರುವ ಬಿಂಬ ಮಾತ್ರವೆಂಬುದನ್ನು ಅರುಹುತ್ತಾರೆ. ಈ ವಿಕೃತಿಯು ಬಿಡುಗಡೆಗೆ "ಸಂಚಿತಾರಬ್ಧವಾಗಾಮಿ" ಎಂಬ ಕರ್ಮತ್ರಯಗಳನ್ನು ಅನುಭವಿಸಿ ಕಳೆಯಬೇಕು. ಆಗ ಲೋಕ ಜೀವನದಲ್ಲಿದ್ದು ಮುಕ್ತಿಯನ್ನು ಪಡೆಯಬಹುದು. ಇದಕ್ಕೆ ಜೀವನ್ಮುಕ್ತಿಯೆಂದೂ ಈ ದೇಹವಳಿದನಂತರ ದೊರೆಯುವುದು ವಿದೇಹಮುಕ್ತಿಯೆಂದೂ ವೇದಾಂತದ ನಿರೂಪಣೆ. ಈ ರೀತಿ ಯಾಗಿ ವೇದಾಂತಪರವಾದ ಉಪನಿಷತ್ತುಗಳ ಸಾರವನ್ನು ತ್ರಿವಿಧಿಯಲ್ಲಿ ರಚಿಸಿ, ಶಿವ ಜೀವಜಗತ್ತು ಇವುಗಳ ವ್ಯಾಖ್ಯಾನ ಮಾಡಿದ್ದಾರೆ. ಇವುಗಳಲ್ಲಿ ಕಾಣುವ ಭಿನ್ನತೆ ಮತ್ತು ಅಭಿನ್ನತೆಯ ದರ್ಶನವನ್ನು ಕರ್ಮತ್ರಯಗಳು ಮುಕ್ತಿವರ್ಣನೆ, ಯೋಗ ದರ್ಶನ ಮುಂತಾದುವುಗಳನ್ನು ವಿವರಿಸಿದ್ದಾರೆ. ಈ ಕೃತಿಯ ಕೆಲವು ಗೀತೆಗಳಲ್ಲಿ ಉಪನಿಷತ್ತಿನ ಕೆಲವು ವಾಕ್ಯಗಳನ್ನೇ ಭಾಷಾಂತರ ಮಾಡಿದಂತೆ ಕಾಣುತ್ತದೆ. ವೇದಾಂತದ ವಿಷಯ ಉಪನಿಷತ್ತಿನದೇ. ಆದರೂ ಅವುಗಳ ಪ್ರತಿಪಾದನೆಯನ್ನು ಸ್ವಾನು ಭವದ ಸ್ವತಂತ್ರ ವಿಚಾರಸರಣಿಯಿಂದ ತುಂಬಿಸಿದ್ದಾರೆ. ಒಂದು ದೃಷ್ಟಿಯಿಂದ ಉಪನಿಷತ್ತಿನ ಮೇಲೆ ಮಾಡಿರುವ ಸ್ವತಂತ್ರ ವ್ಯಾಖ್ಯಾನವೆನ್ನಬಹುದು. ಅದ್ವೈತದರ್ಶನವನ್ನೇ ಆಧಾರ ವಾಗಿಟ್ಟುಕೊಂಡು ಗೀತೆಗಳನ್ನು ರಚಿಸಿರುವುದರಿಂದ ಈ ಕೃತಿ ಯಲ್ಲಿ ಉಪನಿಷತ್ತಿನ ಶಂಕರಭಾಷ್ಯವನ್ನು ಹೆಚ್ಚು ಅವಲಂಬಿ

ಿರುವುದು ಕಂಡುಬರುತ್ತದೆ. ಇಲ್ಲಿರುವ ಉದಾಹರಣೆಗಳು ಜನಸಾಮಾನ್ಯರ ನಿತ್ಯಜೀವನ ಘಟನೆಗಳೇ ಆಗಿರುವುದರಿಂದ ಅದ್ವೈತ ತತ್ವದ ಹಿರಿಮೆಯನ್ನೂ ಉಪನಿಷತ್ತುಗಳ ಮೇಲಿರುವ ಅದ್ವೈತದ ಮತವ್ಯಾಖ್ಯಾನವನ್ನೂ ಸುಲಭವಾಗಿ ಅರಿಯಲು ಈ ಕೃತಿ ಸಹಾಯಕವಾಗುತ್ತದೆ. ಈ ಕೃತಿಯ ಬಗ್ಗೆ ಅಭಿಮಾನದಿಂದ ಹೇಳಿಕೊಂಡಿದ್ದಾರೆ.

"...................................... ..........ಇದು ವೇದಶಿರದರ್ಥವಿದು ಸಕಲಶಾಸ್ತ್ರೋಕ್ತ।ವಿದು ಪುರಾತನರ ಮತವಿದು ಗುರೂಕ್ತಿ। ಮತ್ತಿದು ತತ್ವವಿದರ ನಿಜಮಾರ್ಗ ॥೨॥ ಅದು ಕಾರಣಂ ಮುಕ್ತಿ ಪದವನೆಳಸುವರೆಲ್ಲ। ರಿದನೆ ಗುರುಮುಖದೊಳೊಲಿದೋದಿ ಕೇಳಿ ತಿಳಿ।ವುದು ಬಳಲದನ್ಯಮತದಲ್ಲಿ ॥೩॥.................................. ................ರನ್ನ ಗನ್ನಡಿಯಲ್ಲಿ ತನ್ನ ಮೊಗದಂದಮಂ। ಚನ್ನಾಗಿ ಕಾಣ್ಬತೆರನಂತೆ ನಿಜವಿದರೊಳಂ ನಾಡೆತೋರ್ಪುದಖಿಳರ್ಗೆ ॥೫॥ ಬೇರೆ ಬೇರೋದಿ ಬಾಯಾರದಿದನೊಮ್ಮೆನಲ। ವೇರಿ ಕೇಳ್ದಿವರು ಪರಮ ಶಿವಪದವನುರೆ। ಸೂರೆಗೊಂಡಿಹರು ಸುಖದಲ್ಲಿ ॥೬॥........ ......."

ಮೇಲಿನ ವಾಕ್ಯಗಳು ಈ ಕೃತಿಯನ್ನು ಓದಿದವರಿಗೆ ಸಹಜ ಎನ್ನಿಸುತ್ತವೆ. ಈ ಕೃತಿಯು ವೇದಾಂತವನ್ನು ಅರಿಯಲು ಅಪಾರ ಉಪಕಾರಿಯಾಗುತ್ತದೆ. ಆದುದರಿಂದಲೇ ಇದು ಜನಪ್ರಿಯ ಹಾಡುಗಬ್ಬವಾಗಿ ಮೆರೆದಿದೆ.

## (೫) ಪರಮಾನುಭವ ಬೋಧೆ

ಹಿಂದೂದರ್ಶನಶಾಸ್ತ್ರದ ಆದ್ಯಪ್ರವರ್ತಕರೆನಿಸಿದ ಯಾಜ್ಞವಲ್ಕ್ಯರಿಗೆ ಗಾರ್ಗಿ ಮತ್ತು ಮೈತ್ರೇಯಿ ಎಂಬ ಇಬ್ಬರು ಮಡದಿಯರು. ಇಬ್ಬರೂ ತತ್ವಜ್ಞಾನಿಗಳು. ಅವರಲ್ಲಿ ಕಿರಿಯಳಾದ

ಮೈತ್ರೇಯಿ ವಿಚಾರಶೀಲಳು. ಸರ್ವಜ್ಞನೆನಿಸಿದ ತನ್ನ ಪತಿಯನ್ನು ಪ್ರಶ್ನಿಸಿ ಸೃಷ್ಟಿ ಸ್ಥಿತಿ ಲಯಗಳ ಆದ್ಯಂತವನ್ನು ಅರಿತು ಅನುಭವಿಸಿ ತಾನು ಆನಂದಪಟ್ಟುದಲ್ಲದೆ ಈ ಜಗತ್ತಿಗೇ ಆ ಅಮೃತವು ದೊರೆಯುವಂತೆ ಮಾಡಿದ ಮಹಾತಾಯಿ ಆಕೆ. ಶ್ರುತಿ ಸ್ಮೃತಿಗಳ ಆಧಾರದ ಮೇಲೆ ಯಾಜ್ಞವಲ್ಕ್ಯರು ಆಕೆ ಕೇಳಿದ ಪ್ರಶ್ನೆಗಳಿಗೆ ಉತ್ತರ ನೀಡಿದರು. ಆದರೂ ಆ ವಿಚಾರಲಹರಿ ಏಕಮುಖವಾಗಿ ಪ್ರವಹಿಸಿಲ್ಲ. ಅನಂತಮುಖವಾಗಿ ಚಲಿಸಿರುವ ತತ್ತ್ವಾಮೃತ ಧಾರೆಯನ್ನು ಒಂದೆಡೆ ಕೂಡಿಸಿರುವ ಸಾಹಸದ ಪ್ರತೀಕವೇ ಈ ಕೃತಿ. ಈ ಗ್ರಂಥದ ಆದಿಯಲ್ಲಿ—

" ವಿರಚಿಸುವೆನು ಯಾಜ್ಞವಲ್ಕ್ಯ ಮೈತ್ರೇಯಿಯು ।
ವರಸಂವಾದವನೆ ಕನ್ನಡವಾಗಿ
ಪರಮಾರ್ಥವಿದು ಪರತರವೆಂದು ಪೊಗಳೆ ವಿ ।
ಸ್ತರವಾಗಿ ಸಾಧಕರರಿವಂತೆ "

ಎಂದು ಇದು ಯಾಜ್ಞವಲ್ಕ್ಯ ಮೈತ್ರೇಯಿಯರ ಸಂವಾದವೆಂದು ಹೇಳಿದ್ದಾರೆ. ಸಾಂಗತ್ಯರೂಪದಲ್ಲಿ ಪ್ರವಹಿಸಿರುವ ಆಧ್ಯಾತ್ಮ ಜಿಜ್ಞಾಸೆಯ ಅಮರಕಾವ್ಯ ಈ ಕೃತಿ. ಇದರಲ್ಲಿ ಅದ್ವೈತದರ್ಶನವನ್ನೇ ಪ್ರಧಾನವಾಗಿ ಹೇಳಲು ಆರಂಭಿಸಿ ಅದ್ವೈತದರ್ಶನದ ಸ್ವತಂತ್ರಗ್ರಂಥವೆನ್ನುವಷ್ಟು ಮಟ್ಟಿಗೆ ಕಾವ್ಯವನ್ನು ಸೃಷ್ಟಿಸಿದ್ದಾರೆ.

........ ..... .. ........

ಸುದತಿ ಕೇಳೀ ವಿಶ್ವದೊಳಗಿಂತು ।
ನಿನ್ನಂತೆ ಪದಪಿಂದಕೇಳ್ವವರಾರುಂಟು ॥
ಸದಮಳಾನಂದಾತ್ಮ ಪದಮುಕ್ತಿ ಪುಣ್ಯಾವಿ ।
ಲ್ಲದವರ್ಗದೆಂತು ಪೇಳ್ದೊರಕೊಳ್ಳು ॥೨॥

ಆದರಿಂದೆ ಧನ್ಯೆ ನೀನದರಿಂ ಕೃತಾರ್ಥೆ ನೀ ।
ನದರಿಂದೆ ನೀನಿಲ್ಲಿ ಕೃತಕೃತ್ಯೆ ॥
ಆದರಿಂದೆ ನಿನಗೆ ಪೇಳ್ವೆನು ಕೇಳು ಮೈತ್ರೇಯಿ ।
ಪದಪಿಂದದ್ವೈತ ವಿಷಯವನು ॥೩॥

...........................

ಈ ಪದ್ಯದಿಂದ ಈ ಗ್ರಂಥದಲ್ಲಿರುವ ವಿಷಯವೇನೆಂಬುದನ್ನು ಸುಲಭವಾಗಿ ತಿಳಿಯಬಹುದು. ಆರು ಸಂಧಿಗಳು ೧೨೨ ಸೂತ್ರಗಳು ೯ಲ೫ ಪದ್ಯಗಳಲ್ಲಿ ಜೀವ ಜಗದಾದಿ ವಿಷಯಗಳನ್ನು ವಿವರಿಸಿದ್ದಾರೆ. ಮೊದಲ ಮೂರು ಅಧ್ಯಾಯಗಳಲ್ಲಿ ಅದ್ವೈತದ ಸಿದ್ಧಿ ಮತ್ತು ಅದರ ಸ್ಥಿತಿಯನ್ನು ವಿವರಿಸಿದೆ. ಮುಂದಿನ ಮೂರು ಅಧ್ಯಾಯಗಳಲ್ಲಿ ಸಾಧನಾಮಾರ್ಗ ಮತ್ತು ಅದರ ಲಕ್ಷಣಗಳ ವಿವೇಚನೆಯಿದೆ.

...........................

ಇದು ವೇದವೇದಾಂತದೊಳು ಗೌಪ್ಯವಾದರ್ಥ ।
ವಿದು ಪುರಾಣಸ್ಮೃತಿಗಳ ಸಾರ ॥
ಇದು ಪರಮಾರ್ಥದ ತಿರುಳು ತತ್ವರಹಸ್ಯ ।
ವಿದು ಪ್ರಾಕೃತವೆಯುಲ್ಲ ತಿಳಿಯಲ್ಕೆ ॥೪॥

...........................

ಇದು ನಿಜಗುಣಯೋಗಿ ಮುದದಿಂದೆ ತಿಳಿಯುಪೇ ।
ಳಿದ ಯಾಜ್ಞವಲ್ಕ್ಯ ಮೈತ್ರೇಯಿಯ ॥
ಪೊದವಿದ ಸಂವಾದದೊಳಗಾರನೆಯಸಂಧಿ ।
ಸದಮಳ ಪರಮಾನುಭವ ಬಂಧಿ ॥೫॥

ಎಂದು ಕೃತಿಯನ್ನು ಮುಗಿಸುತ್ತಾರೆ. ಫಲವು ಶ್ರುತಿಗಳಿಂದೆ

ಪಲವನುಭವದಿಂದೆ ಪಲವು ದೃಷ್ಟಾಂತ ಯುಕ್ತಿಗಳಿಂದೆ ನಲಿದು ಬೋಧಿಸಿದ ಈ ಕೃತಿ ಅದ್ವೈತದರ್ಶನದ ಅಮರಕೃತಿಯೆನಿಸಿದೆ.

**೬. ಪರಮಾರ್ಥಗೀತೆ**

ಯೋಗವಾಸಿಷ್ಠ, ವೇದ, ಉಪನಿಷತ್ತು, ಧರ್ಮಸೂತ್ರಗಳು ಮತ್ತು ಪುರಾಣಪ್ರದ ಧರ್ಮದರ್ಶನಗಳನ್ನು ಪ್ರತಿಬಿಂಬಿಸುವ ಕನ್ನಡದ ಆಧ್ಯಾತ್ಮಿಕ ಕೃತಿ. ೧೧ ಗೀತಗಳಲ್ಲಿ ಜಗದೀಶ ಜೀವೇಶ ಜಗತ್ತು ಇವುಗಳ ಸಂಬಂಧವನ್ನೂ ಅದರ ಸ್ವರೂಪವನ್ನೂ ಏಕತ್ವ ಭಿನ್ನತ್ವಗಳ ಕಾರಣ ವಿವರಣಗಳನ್ನೂ ಹೃದಯಂಗಮ ವಾಗಿ ವಿವರಿಸಿದ್ದಾರೆ—

"ಸತ್ಯಂ ಜ್ಞಾನಸುಖಾತ್ಮಕನೆಂದು ।
ನಿತ್ಯಂ ಪರಿಪೂರ್ಣ ತಾನೆಂದು ॥
..........................................
ಮನಸಿಗೆ ಗೋಚರಮೆಂದೆನಿಸುತ್ತ ।
ಜಾನಿಸಿ ಪೇಳಿತು ಶ್ರುತಿಗಳ ಮೊತ್ತ ॥"

ಎಂದು ಪರವಸ್ತುವಿನ ಲಕ್ಷಣವನ್ನು ಹೇಳುತ್ತಾರೆ. ಒಂದೇ ಆದ ಪರವಸ್ತುವು ನಾನಾರೂಪಾದ ಕಾರಣಸ್ವರೂಪಗಳ ವಿವೇಚನೆ ಮಾಡಿದ್ದಾರೆ.

"ಸೇವಪರಿಷ್ಟವ ನೀವಾ ಶಕ್ತಿ । ಭಾವಿಸೆ ನಿನ್ನೊಳು ಸುವಿಚ್ಛಕ್ತಿ ॥
ವಾಣಿಯೆನಿಸಿ ವಾಕ್ಸಿದ್ಧಿಯನಿತ್ತು ।
..........................................
ತಾನೇ ಭುವನೇಶ್ವರಿಯಾಗಿಹಳು । ನಾನಾಭಕ್ತ ಸುಖಪ್ರದೆಯುಹಳು ॥"

ಎಂದು ಶಕ್ತಿ ಜಗತ್ಕಾರಣಳೂ ಜಗತ್ಸ್ವರೂಪಳೂ ಆಗಿರುವ ಳೆಂದು ಅರುಹುತ್ತಾರೆ. ಪರವಸ್ತುವನ್ನು ಶಬ್ದವೆಂದೂ ಶಬ್ದ

ಬ್ರಹ್ಮನೆಂದೂ ಶ್ರುತಿಗಳು ಹೇಳುತ್ತವೆ. ಅಲ್ಲಿಂದ ಮುಂದೆ ಧ್ವನಿ ವಿಕಾಸವಾಗುತ್ತದೆ. ಪ್ರಪಂಚದ ರಚನೆಯಾಗುತ್ತದೆ. ಮೂಲ ಶಬ್ದ ಪ್ರಣವವೆಂದು ಹೇಳಿದ್ದಾರೆ.

"ನಿನ್ನೊಳು ಶಬ್ದಬ್ರಹ್ಮವೆನಿಪ್ಪ ।
ಮುನ್ನಾಯಿತು ಪರ್ವಾತ್ಮಕವಪ್ಪ ॥
ಪ್ರಣವಂ ಕೇಳದರಿಂ ಗುಣವರ್ನ ।

ಎಂಬ ಶಬ್ದಬ್ರಹ್ಮನ ರೂಪುರೇಷೆಗಳನ್ನು ತಿಳಿಸುವ ಪದ್ಯದಲ್ಲಿ ಪಂಚೀಕರಣವನ್ನು ಸ್ಥೂಲವಾಗಿ ವಿವರಿಸುತ್ತಾರೆ. ಪರವಸ್ತುವು ಒಂದೇ ಆದರೂ ಸತ್ವರಜಸ್ತಮೋಗುಣಗಳ ಪ್ರಭಾವಕ್ಕನುಗುಣವಾಗಿ ಪ್ರಪಂಚ ವಿಕಾರವನ್ನು ಕಾಣುತ್ತೇವೆಂದು ಗುಣಭೇದ ವಿಕಾರಗತಿಯಲ್ಲಿ ತಿಳಿಸುತ್ತಾರೆ. ಈ ಆಂತರಂಗಿಕ ಆಧ್ಯಾತ್ಮ ಜಿಜ್ಞಾಸೆಯನಂತರ ವಿಜ್ಞಾನಾತ್ಮಕವಾಗಿ ಪಿಂಡದುದಯವನ್ನು ಹೇಳಿದ್ದಾರೆ.

ಮಾತಾಪಿತರುಂಡನ್ನ ರಸದೊಳು । ರೇತಮುದಿಸಲಂತಾ ದೇಹದೊಳು ॥
ಆರುಂ ಕೋಶಂ ರತಮಿವೇಳು । ನೀರೆನೆ ನೋಡಿಂತಿವು ಧಾತುಗಳು ॥
ಆಗಲಿ ಕೇನಾ ರತಿಮಂಥನದೊಳು । ಯೋಗವಹುದು ರೇತಂ ರಕ್ತದೊಳು ॥
ಮತ್ತಾ ಯೋಗವಿಧಂ ತನುವಿಂಗೆ । ಚಿತ್ತದರಿಂ ಸಂಸ್ಕೃತಿ ಜೀವಂಗೆ ॥
..................................................
ಸೂತಿಮರುತನಿಂದಿದುಜನಿಯಿಕ್ಕು । ಈ ತೆರದಿಂ ಪಿಂಡೋದಯವಕ್ಕು ॥

ಗರ್ಭದಲ್ಲಿ ಶಿಶುರೂಪವ ತಳೆಯುವ ಕ್ರಮ, ಸಾಧನಗಳನ್ನು ವೈಜ್ಞಾನಿಕವಾಗಿ ಪಿಂಡೋದಯಗತಿಯಲ್ಲಿ ವರ್ಣಿಸಿದ್ದಾರೆ. ಪಂಚಭೂತಗಳು ದೇಹದಲ್ಲಿ ಪಂಚಶಕ್ತಿಯೆಂಬುದನ್ನು ವಿವರಿಸುತ್ತಾ ಶಬ್ದಭೇದ ಮತ್ತು ಜಗದ್ರೂಪವನ್ನು ವಿಶ್ವರಚನಾಭೇದ

ಪ್ರಕರಣದಲ್ಲಿ ವಿವರಿಸಿದ್ದಾರೆ. ಆರನೇ ಗತಿಯಲ್ಲಿ ಜೀವ, ಬಂಧ, ಮೋಕ್ಷಗಳನ್ನು ವರ್ಣಿಸಿರುವುದು ಮನೋಜ್ಞವಾಗಿದೆ.

"ಚಿತ್ತೇಸಾಕ್ಷಾದೀಶನುಕಂಡ್ಯಾ । ಮತ್ತಾಈಶನೆ ಜೀವನುಕಂಡ್ಯಾ ॥

..............................................................

ಈಶನುತಾನೇಸಂಕೋಚತೆಯ । ಲೇಶದಿಬಗೆವಡೆದನು ಜೀವತೆಯ"

ಎಂದು ಜೀವದ ಕಲ್ಪನೆ ನೀಡುತ್ತಾರೆ. ಅಹಂಕಾರಮಮಕಾರಗಳು ಜೀವನ ಸಂಕೋಚಾವೃತ್ತಿಗೆ ಕಾರಣ. ಈ ಅಹಂಕಾರವನ್ನು ತೊಡೆದರೆ ಜೀವನೇ ಶಿವನೆಂಬ ಅರಿವು ಸಮಗಾಗುತ್ತದೆ.

ಪುಟ್ಟುವ ಸುವಿವೇಕದವಸದಿಂದ । ನೆಟ್ಟನೆಕವಿವ್ರದುಮಾನದುಳಿಯಿಂದ ॥
ಜಡದಿಪ ಸಂಕಲೆಯುಂ ಕಡಿವಂತೆ । ಕಡಿದೊಡೆ ನೀನಹೆಮುಕ್ತನಂತೆ ॥

ಎಂದು ಜೀವನ ಶಿವತ್ವವನ್ನು ಹೇಳುತ್ತಾರೆ, ಭಕ್ತಿಜ್ಞಾನವೈರಾಗ್ಯಗಳನ್ನು ಅಳವಡಿಸಿಕೊಂಡ ಜೀವಿ ಪರಮಾನಂದ ಹೊಂದುವನು.

"ಜೀವೇಶ್ವರಯೋಗವನರಿದಂದು । ಭಾವಾಧ್ಯಾಸಕೆಹರವಾದಂದು ॥
ಭವದಲತೆಯಬೇರಂ ಕೊಯ್ದವನು । ತವೆಪರಮಾನಂದವನೈದುವನು ॥

ಎನ್ನುತ್ತಾರೆ.

ಅಷ್ಟಮಗತಿಯಲ್ಲಿ ಜೀವೇಶ್ವರರೈಕತ್ವದ ನಿಲವನ್ನು ವಿವರಿಸುತ್ತಾ "ತತ್ವಮಸಿ" ಮಹಾವಾಕ್ಯದ ಅರ್ಥವನ್ನು ತಿಳಿಸುತ್ತಾರೆ. ಮುಂದೆ ಯೋಗಮಾರ್ಗವನ್ನು ಅರುಹುತ್ತಾ ಅದರ ಮಹತ್ವವನ್ನು ಹೇಳಿದ್ದಾರೆ. ಜೀವೇಶರ ಏಕಭಾವಕ್ಕೆ ಸಾಧನೆಬೇಕು. ಯೋಗಮಾರ್ಗವೊಂದು ಸಾಧನ. ಆದರೆ ಅದು ಎಲ್ಲರಿಗೂ ಸಾಧ್ಯವಲ್ಲ. ಆದುದರಿಂದ ಈಶನಿಗೊಂದು ಮೂರ್ತಿತ್ವವನ್ನು ಕಲ್ಪಿಸಿ ಅದನ್ನು ಧ್ಯಾನಿಸಿ ಸುಜ್ಞಾನ ಪಡೆಯುವರೀತಿ ದಶಮಗತಿ

ಯಲ್ಲಿ ಹೇಳಿದೆ. ಇದುವರೆಗೆ ಸಾಧನಾಕ್ರಮಗಳನ್ನು ವಿವರಿಸಿ ಕೊನೆಯಲ್ಲಿ ನಿರ್ವಾಣಸ್ಥಿತಿಯನ್ನು ಹೃದಯಂಗಮವಾಗಿ ಹೇಳಿದ್ದಾರೆ.

"ಜನಕೆತೋರಿಕೆಗಳ್ತನ್ನೊಳಡಗಿ । ಅಡಗಿತ್ತೆಂಬೀಭಾವನೆಯುಡುಗಿ ॥
ಉದಿಸಿದ ಸಲೆ ನಿತ್ಯಾದ್ವಯರೂಪು । ಅದುತಾನೇ ಪರಮಾತ್ಮನರೂಪು ॥

ಎಂದಿದ್ದಾರೆ. ಈ ಕೃತಿಯಲ್ಲಿರುವ ವಿಷಯವನ್ನು ಅಂತ್ಯದ ಗತಿಯಲ್ಲಿ ವಿವರಿಸಿದೆ.

ಬಗೆದೋರಿಕೆಜಗದುದ್ಭವವೆಂದು । ಬಗೆವಿಸ್ತರಿಸಿದುದೇ ಸ್ಥಿತಿಯೆಂದು ॥
ಭಾವಿಸೆಬಗೆಗೆಡಲದುಲಯವೆಂದು । ಜೀವೇಶರಿಗೇಕತ್ವಮಿದೆಂದು ।
ನಿರ್ವಾಣದ ನಿಜಮಂ ತಿಳಿಪಿದೆವು । ಸರ್ವಸುಭೂಮಿಗಳಂ ಪೇಳಿದೆವು ॥
ಯೋಗನಿಷ್ಠೆಗಳಂತೋರಿದೆವು । ಯೋಗಿಯಸುಸ್ಥಿತಿಯಂತೋರಿದೆವು ॥

ಈ ಮಾತಿನಲ್ಲಿ ಈ ಕೃತಿ ವಿಚಾರದ ವಿವರಣೆಯಿದೆ. ಮೋಕ್ಷ ಸಾಧಕರಿಗೆ ಜಿಜ್ಞಾಸುಗಳಿಗೆ ಮತ್ತು ತತ್ವಾಭಿಮಾನಿಗಳೆಲ್ಲರಿಗೂ ಪ್ರಿಯಕರವಾದ ಗೀತಕಾವ್ಯ ಪರಮಾರ್ಥಗೀತೆ, ನೂರಾರು ಗ್ರಂಥಗಳ ಸಾರಸರ್ವಸ್ವವನ್ನು ತಿಳಿಗನ್ನಡದಲ್ಲಿ ಅಡಗಿಸಿ ಕನ್ನಡಿಗರಿಗೆ ಆತ್ಮತತ್ವಾಮೃತದ ಧಾರೆಯೆರೆದಿದ್ದಾರೆ.

## (೭) ವಿವೇಕ ಚಿಂತಾಮಣಿ

ನಿಜಗುಣರ ಆರು ಶಾಸ್ತ್ರಗ್ರಂಥಗಳಲ್ಲಿ ಇದು ಅತ್ಯಂತ ಮಹತ್ವದ ಮತ್ತು ಬೃಹತ್ತಾದ ಕೃತಿ. ಸಕಲ ವಿಷಯಾಮೃತಸಾಗರ. ಇದನ್ನು ಕನ್ನಡದ ವಿಶ್ವಕೋಶವೆಂದು ಕರೆಯುತ್ತಾರೆ. ಅವರ ಕಾಲದವರೆಗಿದ್ದ ಭಾರತೀಯ ದರ್ಶನ, ಸಂಸ್ಕೃತಿ, ಧರ್ಮ, ವಸ್ತು ವಿಷಯಾದಿಗಳನ್ನೆಲ್ಲಾ ಇದರಲ್ಲಿ ತಿಳಿಯಬಹುದಾಗಿದೆ. ಸಹ

ಸ್ವಾರು ಜನ ಪಂಡಿತರು ಮಾಡುವ ಕಾರ್ಯವನ್ನು ಈ ಕೃತಿಯಲ್ಲಿ ತಾವೊಬ್ಬರೇ ಹೆಣೆದಿದ್ದಾರೆ. ಇದರಲ್ಲಿ ೯೦ ಪ್ರಕರಣಗಳಿವೆ. ಮೊದಲಿನ ಎರಡು ಪ್ರಕರಣಗಳಲ್ಲಿ ವೇದಾಂತ ಮತ್ತು ವೀರಶೈವ ಸಿದ್ಧಾಂತಗಳು ವಿವರಿಸಲ್ಪಟ್ಟಿವೆ. ಮುಂದಿನ ಪ್ರಕರಣಗಳಲ್ಲಿ ಧಾರ್ಮಿಕ ನೈತಿಕ ವಿಷಯಗಳೂ, ಜ್ಯೋತಿಷ್ಯ, ಸಂಗೀತ, ಸಾಹಿತ್ಯ, ಖಗೋಳ, ಭೂವಿವರಣೆಯನ್ನೆಲ್ಲಾ ಹೇಳಿದೆ. ಆರು ಸಾವಿರ ಗ್ರಂಥಗಳ ಆಧಾರದಿಂದ ಇದರಲ್ಲಿರುವ ೭೬೩ ವಿಷಯಗಳನ್ನು ಸಂಗ್ರಹಿಸಿ ರಚಿಸಿರುವುದಾಗಿ ಅವರೇ ತಿಳಿಸಿದ್ದಾರೆ. "ಸ್ಮೃತಿ ಪುರಾಣೇತಿಹಾಸ ಪುರಾತನೋಕ್ತಿಗಳನುಸಾರದಿಂದನುಭವಿಗಳಹುದೆನಿಪ್ಪಂತೆ ಸ್ವಕಪೋಲ ಕಲ್ಪಿತಮಲ್ಲದಸಾರತರಮಾದ ಸತ್ಯಾರ್ಥಂಗಳನೆ ಸಂಗ್ರಹಿಸಿ ಮುನ್ನುಳ್ಳ ಮಣಿಪುಂಜಮಂ ರಂಜನಂಗೈದು ತರವರಿತು ಸರಂಗೊಳಿಸಿ ನವೀನ ಕಂಠಾಭರಣಮೆನಿಸುವಂತೆ ಮುಮುಕ್ಷುಜನಂಗಳೀ ಜಗತ್ತಿನ ಸ್ಥಿತಿಗತಿಗಳಾವಪ್ರಕಾರದಿಂದಿಹವೆಂದರಸಿ ಬಳಲದಭಿವ್ಯಕ್ತ ಮಾಗಿಲ್ಲಿ ಯೆಸಲೀಲೆಯಿಂದರಿದು ಕೃತಾರ್ಥರಾಗಲೆಂದು ನಿಜಗುಣಶಿವಯೋಗಿ ಬೆಳುಗನ್ನಡಮಾದ ವಚನರಚನೆಗಳಿಂ ವಿವೇಕ ಚಿಂತಾಮಣಿಯೆಂಬ ಪ್ರಕರಣಮಂ ಪೇಳ್ವನದೆಂತೆಂದೊಡೆ" ಎಂದು ಗ್ರಂಥಾರಂಭದಲ್ಲಿ ಹೇಳಿದೆ. ಇದರಿಂದ ಈ ಗ್ರಂಥದ ಹಿರಿಮೆಯು ಅರ್ಥವಾಗುತ್ತದೆ. ಭಾರತೀಯ ಜೀವನದರ್ಶನವನ್ನು ಸಮಗ್ರವಾಗಿ ಈ ಗ್ರಂಥದಿಂದ ತಿಳಿಯಬಹುದು. ಅಂದರೆ ಇದರಲ್ಲಿ ದರ್ಶನಗಳ ಹಾಗೂ ಧರ್ಮಗಳ ವಿವರಣೆಯಿದೆ. ಸಂಸ್ಕೃತಗ್ರಂಥಗಳನ್ನೋದಿ ಅರ್ಥಮಾಡಿಕೊಳ್ಳಲು ಅಸಮರ್ಥರಾದಾಗ ಈ ಗ್ರಂಥವು ಅರ್ಥಕೋಶದಂತೆ ನೆರವಾಗುತ್ತದೆ. ಹೃದ್ಯವಾದ ಗದ್ಯ ಶೈಲಿಯಲ್ಲಿ ಈ ಗ್ರಂಥ ರಚಿತವಾಗಿದೆ. ಎಲ್ಲ

ವಿಷಯಗಳನ್ನೂ ಅಭ್ಯಾಸಬಲದಿಂದ ವರ್ಣಿಸಿದ್ದರೂ ಶಿವಭಕ್ತಿ ಶಿವಯೋಗದರ್ಶನ ನಿರೂಪಣೆಯು ಅವರ ಅನುಭವದ ಪಕ್ವಫಲ ವಾಗಿ ಈ ಕೃತಿಯಲ್ಲಿ ಪ್ರತಿಬಿಂಬಿಸಿದೆ. ಇದು ಸರ್ವಜನೋಪ ಯುಕ್ತ ಗ್ರಂಥ.

ಕೊಡಗಿನ ಲಿಂಗರಾಜರು ಈ ಗ್ರಂಥವನ್ನು ಸಂಸ್ಕೃತಕ್ಕೂ ಶಾಂತಲಿಂಗದೇಶಿಕನು ಇದನ್ನು ಮರಾಠಿ ಭಾಷೆಗೂ ಸುಮಾರು ೧೮ನೇ ಶತಮಾನದಲ್ಲಿಯೇ ಭಾಷಾಂತರಮಾಡಿರುವುದರಿಂದ ಈ ಕೃತಿಯ ಮಹತ್ವ ಹಿರಿದೆಂದು ಅರಿವಾಗುತ್ತದೆ.

ಇದುವರೆಗೆ ಹೇಳಿದ ಗ್ರಂಥಗಳು ನಿಜಗುಣರ ಪಾಂಡಿತ್ಯ ಅಧ್ಯಾತ್ಮಶಕ್ತಿಗಳನ್ನಷ್ಟೇ ಅಲ್ಲ, ಅವರ ಸಾಧನೆಯ ಬಗ್ಗೆ ಅಚ್ಚರಿ ಯನ್ನುಂಟುಮಾಡುತ್ತವೆ. ಈ ಕನ್ನಡ ಕೃತಿಗಳಲ್ಲದೆ 'ಆತ್ಮ ತರ್ಕ ಚಿಂತಾಮಣಿ' ಮತ್ತು 'ದರ್ಶನಸಾರ' ವೆಂಬ ಸಂಸ್ಕೃತ ಗ್ರಂಥಗಳನ್ನು ರಚಿಸಿರುವುದಾಗಿ ತಿಳಿಯಬಂದಿದೆ. ಆದರೆ ಅವು ಉಪಲಬ್ಧವಿಲ್ಲ. ಈ ಪ್ರಕರಣದಲ್ಲಿ ಸೂಕ್ಷ್ಮಾತಿಸೂಕ್ಷ್ಮವಾಗಿ ನಿಜಗುಣರ ಕೃತಿಸಾರಧಾರೆಯನ್ನು ಹರಿಸಿದೆ. ಸಮಗ್ರಕೃತಿ ಯನ್ನು ಪರಾಮರ್ಶಿಸಿದಾಗ ಕನ್ನಡಿಗನ ಹೃದಯ ತಾನಾಗಿ ಹಿಗ್ಗುತ್ತದೆ. ಕೃತಿಗಳು ಕನ್ನಡಮ್ಮನ ಅನರ್ಘ್ಯ ಕಂಠಾಭರಣ ಗಳಾಗಿವೆ.

## ೭. ನಿಜಗುಣಪ್ರಶಸ್ತಿ

ನಿಜಗುಣರು ಮಾನವಕುಲದ ಮನ್ನಣೆಗೆ ಪಾತ್ರರಾದ ಮಹಾನುಭಾವರು. ಅವರ ಕೃತಿಗಳು ನಿತ್ಯಪ್ರಶಸ್ತಗ್ರಂಥಗಳು. ಅವರ ಬಗ್ಗೆ ಪ್ರತ್ಯೇಕ ಪ್ರಶಸ್ತಿಯ ಅಗತ್ಯವಿಲ್ಲ. ಅವರ ಪ್ರಭಾವ ವಿಮರ್ಶಕರ ಮೇಲೆ ಮತ್ತು ಜಿಜ್ಞಾಸುಗಳ ಮೇಲೆ

ಎಷ್ಟರಮಟ್ಟಿಗೆ ಆಗಿದೆ ಎಂಬುದನ್ನು ತಿಳಿಯಲು ಒಂದೆರಡನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಅವರೇ ಹೇಳಿಕೊಂಡಿರುವ ಪ್ರಶಸ್ತಿ ಅವರ ಕಾವ್ಯಗಳನ್ನು ಓದಿದವರಿಗೆ ಸಹಜವೆನಿಸುತ್ತದೆ.

ಸಾಂ ॥ ಅನಿಮಿತ್ತಬಾಂಧವನನುಪಮಾನಂದಾಬ್ಧಿ ।
ವಿನಯಾದಿ ಗುಣಗಳ ಮಂಡನ॥
ಜನನವಿದೂರನಧಿಕವಿದ್ಯಾಸಂಪನ್ನ ।
ನೆನಿಸಿರಾಜಿಪ ನಿಜಗುಣಯೋಗಿ ॥[1]

ಎಂದಿರುವುದು ಸತ್ಯಚಿತ್ರವೇ ಆಗಿದೆ. ಮಹಾಕವಿ ಷಡಕ್ಷರಿಯು ಅಭಿಮಾನದಿಂದ ಹೀಗೆ ಹೇಳಿದ್ದಾರೆ:

ಕಂ ॥ ಸುಜನ ವರನತ ಪದನಸದ ।
ಸುಜನವರದ ನತುಳನಾದರಸಿಕನ ವಿಳಸ ॥
ನ್ನಿಜಗುಣಯೋಗಿಯ ನಿರುಪಮ ।
ನಿಜಗುಣಶಿವಯೋಗಿಯಪದಾಬ್ಜ ಕಾನತನಪ್ಪೆಂ ॥ [2]

ಮಹಾಕವಿಯೊಬ್ಬರು ತಮ್ಮ ಕೃತಿಯಲ್ಲಿ ಪ್ರಾರ್ಥನೆ ಮಾಡಿರುವುದು ಅವರ ಮಹಿಮೆಗೆ ಸಾಕ್ಷಿಯಾಗಿದೆ. ನಿಜಗುಣಶಿವಯೋಗಿಗಳು ಮಹಾವಿದ್ವಾಂಸರು ಮತ್ತು ಘನತರ ಗ್ರಂಥಕರ್ತರು[3] ಎಂದು ಇ. ಪಿ. ರೈಸ್‌ರವರು ಪ್ರಶಂಸಿಸಿದ್ದಾರೆ. ತತ್ವಶಾಸ್ತ್ರದ ಘನ ವಿದ್ವಾಂಸರೆನಿಸಿದ ಆರ್. ಡಿ. ರಾನಡೆಯವರು[4] ನಿಜಗುಣರನ್ನು ಕುರಿತು ಅವರು ಮಹಿಮಾಪುರುಷರು ಮತ್ತು ತತ್ವಜ್ಞಾನ

1 ಪರಮಾನುಭವಬೋಧೆ ಸಂಧಿ ೧ ಪದ್ಯ ೮.

2 ರಾಜಶೇಖರವಿಲಾಸ. ಪ್ರಥಮಾಶ್ವಾಸ ಪದ್ಯ ೧೬.

3 He was a great Scholor and prolific writer. History of Kanarese Literature, p. 71.

4 "Now to the final poem of Nijaguna Shivayogi a great Philosopher Mystic" Pathway to god in Kannada Literature, p. 208.

ಕೋವಿದರೆಂದು ಹೇಳಿದ್ದಾರೆ. ಕನ್ನಡ ಕವಿಚರಿತ್ರೆಕಾರರೂ ಆಧುನಿಕ ವಿಮರ್ಶಕರೂ ಅವರ ಕಾವ್ಯಗಳಿಂದ ಪ್ರಚೋದನೆ ಗೊಂಡು ಅಭಿಮಾನಪೂರ್ವಕವಾಗಿ ಅಭಿನಂದಿಸಿರುವುದು ಗಮನಾರ್ಹವಾಗಿದೆ. ಅವರ ಕಾವ್ಯಗಳು ತತ್ವನಿರ್ದೇಶನ, ಸಾಹಿತ್ಯ ಮತ್ತು ವಿಷಯಾನುಸಂಧಾನದೃಷ್ಟಿಯಿಂದ ಕನ್ನಡಸಾರಸ್ವತ ಪ್ರಪಂಚದಲ್ಲಿ ಅಮೂಲ್ಯರತ್ನಗಳಾಗಿವೆ.

## ಕೆಲವು ಸಾಹಿತ್ಯ ಕೃತಿಗಳು

### ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನುತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ॥ ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ
ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ॥ ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣ ಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ॥ ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ॥ ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ॥ ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ॥ ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ